ಅರೆಬಾಸೆ

# ಮುದ್ದು

## ಪೊಗ್ಗು ಮತ್ತೆ ಬೇಸಗೆ

ಸಂಪುಟ–2 ಸಂಚಿಕೆ–3



## ತಿಂಗ ಪತ್ರಿಕೆ

ವಿನೋದ್ ಮೂಡಗದ್ದೆ ಸಾರಥ್ಯಲಿ

## ಚಂದಾದಾರಲ್ಲಿ ಒಂದು ಮನವಿ:

ನಮ್ಮ ಈ ಅರೆಬಾಸೆ ಮುಡ್ಪು ಪತ್ರಿಕೆ ಒಂದು ವರ್ಷನ ಪೂರೈಸುಟು. ಹವಲಾರ್ ಜನ ಚಂದ ಹಣದೊಟ್ಟಿಗೆ ದೇಣಿಗೆನ ಸ ನೀಡಿ ಸಹಕರಿಸಿಯೊಳೊ. ಇನ್ನು ಸಾಕಷ್ಟ್ ಜನ ಚಂದಾರರ್ ಚಂದಾ ಹಣ ಕೊಡಿಕೆ ಬಾಕಿ ಒಳೊ. ಕೆಲವ್ ಫೋನಾಯಿಸಿ ಎಲ್ಲಿ ಹೆಂಗೆ ಕೊಡಕು ತ ಸ ವಿಚಾರಿಸಿಯೊಳೊ. ಈ ಕೆಳಗೆ ನಮ್ಮೊಟ್ಟಿಗೆ ಈ ಪತ್ರಿಕೆನ ಏಳಿಗೆಗೆ ಸಹಕರಿಸಿದ.. ಸಹಕರಿಸ್ತಾ ಇರ್ವ ಕೆಲವ್ ಜನರ ಹೆಸರ್ ಹಂಗೆ ದೂರವಾಣಿ ಸಂಖ್ಯೆಗ ಉಟ್ಟು. ನಿಮ್ಮ ಹಣನ ಅವರತ್ರ ತಲ್ಪಿಸಿರೂ ಆದೆ. ನಿಮ್ಮೆಲ್ಲರ ಪ್ರೋತ್ಸಾಹ ಸದಾ ಹಿಂಗೇ ಇರ್ಲಿ. ಹಂಗೆನೆ ಮುಂದಿನ ವರ್ಷದ ಚಂದಾ ನೀಡವು ಸ ಇವರ್ನ ಸಂಪರ್ಕಿಸಕ್.

| | | |
|---|---|---|
| ಕೊಂಪುಳಿ ಇಂದಿರ | ಮರಗೋಡು | 9448300755 |
| ಚೀಯಪ್ಪನ ಜಲಜಾಕ್ಷಿ | ಮೂರ್ನಾಡು | 9980030582 |
| ಮೇರ್‌ಕಜೆ ಲೋಹಿತ್ | ಮೂರ್ನಾಡು | 9980777704 |
| ಚೀಯಪ್ಪನ ನವೀನ್ | ಬೆಂಗಳೂರು | 8884571075 |
| ಕೊಂಬಂಡ ಭೀಮಯ್ಯ | ಮೈಸೂರು | 9741533567 |
| ಅಮೆಮನೆ ಪಾಲಾಕ್ಷ | ಮಡಿಕೇರಿ | 9449767424 |

**ಇಲ್ಲೆ ತೇಳ್ರೆ ನೇರ ಬ್ಯಾಂಕ್ ಖಾತೆಗೆ ಸ ಜಮಾ ಮಾಡಕ್**

ಹೆಸರ್: Vinodh M.N
ಖಾತೆ ಸಂಖ್ಯೆ: 036001532462
ಬ್ಯಾಂಕ್: ICICI Bank
ಶಾಖೆ: Electronic City
ಐ.ಎಫ್.ಸಿ ಕೋಡ್ : ICIC0000360
Paytm: 9535615759







---


**ಮುದ್ರಕರು : ನೇಹಾ ಕ್ರಿಯೇಷನ್ಸ್, ಬನಶಂಕರಿ 2ನೇ ಹಂತ, ಬೆಂಗಳೂರು–70.**

**ಕೂಡಕಂಡಿರ ತಮ್ಮಯ್ಯ, 98453 19878, 080–26710552**

**ಸಂಪಾದಕೀಯ ಮಂಡಳಿ**
**ಪ್ರಧಾನ ಸಂಪಾದಕ:**
ವಿನೋದ್ ಮೂಡಗದ್ದೆ

**ಸಂಪಾದಕ ಮಂಡಳಿ:**
ಅಮೆಮನೆ ಪಾಲಾಕ್ಷ
ಕೊಂಬಂಡ ಜೀವನ್

## ಸಂಪಾದಕೀಯ

ಎಲ್ಲ ಓದುಗರಿಗೂ ಹಿಂದು ಸಂವತ್ಸರದ ಆದಿಯ ಶುಭಾಶಯಗ. ಎಲ್ಲವೂ ಬಾಳ ಕುಸಿಲಿ ಯುಗಾದಿ ಹಬ್ಬನ ಆಚರಿಸಿಯೊಳ್ಳಿ ತ ಗ್ಯಾನ ಮಾಡ್ನೆ. ಸಿಹಿ ಕಹಿ, ಕಷ್ಟ ಸುಖ ಜೀವನಲಿ ಸಮನಾಗಿ ಇರಲಿ. ಎರಡನೇ ಪಿಯುಸಿ ಮಕ್ಕ ಈಗಾಗಲೇ ಪರೀಕ್ಷೆ ಮುಗ್ಸಿ ಒಂದ್ ಕಡೆ ಕುಸಿಲಿ ಮತ್ತೊಂದು ಕಡೆ ಫಲಿತಾಂಶನ ಗ್ಯಾನ ಮಾಡ್ತಾ ಒಳ್ರಿ ಹಂಗೆನೆ ಸಿ.ಇ.ಟಿ ಮುಂತಾದ ಪರೀಕ್ಷೆ ಸಿದ್ದತೆಲಿ ಸ ಒಳ್ರಿ. ಇನ್ನ್ ಹತ್ತನೇ ತರಗತಿಯ ಮಕ್ಕ ಪರೀಕ್ಷೆನ ತಲೆಬಿಸಿಲೇ ಇರುವರಿ. ಲಾಯ್ಕ ಬರೆಯನಿ.

ಯುಗಾದಿ ಹಬ್ಬದ ಸಂಭ್ರಮಕ್ಕೆ ಮಳೆ ಸ ಹಂಞ ಒತ್ತು ಕೊಟ್ಟುಟು. ಕೊಡಗಿನಾದ್ಯಂತ ಮಳೆ ಆಗಿ ಕೃಷಿಕರ್ ಹಂಞ ಉಸಿರಾಡುವಂಗೆ ಮಾಡುಟು. ಇನ್ನ್ ಮಾರ್ಚ್ ಏಪ್ರಿಲ್ ಬಾತ್ ತೇಳ್ರೆ ಮದ್ವೆ, ಕ್ರಿಕೆಟ್ ತ ಸುರು ಆದೆ. ಎಲ್ಲವೂ ನೆಂಟ್ರ ಮನೆ, ಊರು ತ ಹೇಳಿಕಂಡ್ ಹೊರ್ಡಿಕೆ ತಯಾರಿ ನಡೆಸ್ತಾ ಇರುವರಿ. ದೂರದ ಪ್ರಯಾಣ ಮಾಡ್ಕನ ಹಂಞ ಎಚ್ಚರಂದ ಮಾಡಿ. ಹಂಗೆ ಮಕ್ಕಳಿಗೆ ಗಾಡಿಗಳ ಕೊಡ್‌ಕನ ಸ ಎಚ್ಚರ ವಹಿಸಿ. ಇಂದ್ ಹಲವಾರ್ ಕಡೆ ನೋಡ್ತಾ ಇರುವ ಸುದ್ದಿಗ ನಮ್ಮನ್ನ ಎಚ್ಚರಿಸ್ತಾ ಉಟ್ಟು.

ಊರ್‌ಗಳಿಗೆ ಬರುವವು ಹಂಞ ಸಿಟಿ ಜೀವನದ ಜಂಜಾಟನ ಬುಟ್ಟ್ ಮನೆಯ ಹಿರಿಯರೊಟ್ಟಿಗೆ ಅವರ ಕಾಲದ ರಸವತ್ತಾದ ಕ್ಷಣಗಳ್ನ ಆಲಿಸಿ. ಗದ್ದೆ, ತೋಟ ತಿರ್ಗಿ ಅಲ್ಲಿನ ಹೂವು, ಹಣ್ಣ್, ಮರ, ಗಿಡ, ಪ್ರಾಣಿ, ಪಕ್ಷಿಗಳ ಪರಿಚಯ ಮಾಡಿಕನಿ. ಇಂದ್‌ನ ಪರಿಸರ ಮಾಲಿನ್ಯದ ತೀವ್ರತೆ ಎಲ್ಲಿಗೆ ಬಂದ್ ನಿಂತದೆ ತ ಗೊತ್ತೆ. ಕಲ್ಲ ಮೇಲೆ ಕೊರ್‍ಗಿಕಂಡ್ ಕೂರಿಕೆ ಬದಲ್ ಇರ್‍ಕನ ಅನುಭವಿಸಿ.

ಈ ತಿಂಗಳ ಪುಸ್ತಕ ಕಥೆ, ಕವನ, ಲೇಖನ, ಸುದ್ದಿಗಳ್ನ ಹೊತ್ತ್ ಬಂದುಟು. ಪ್ರೀತಿಂದ ಸ್ವೀಕರಿಸಿ ಸಹಕರಿಸಿ. ಏನೇ ತಪ್ಪು ಒಪ್ಪುಗ ಇದ್ದರೇ ನೇರವಾಗಿ ನಮ್ಮತ್ರ ಹಂಚಿಕಣಿ.

**ಇಂತಿ ನಿಮ್ಮ ಪ್ರೀತಿಯ**
**ವಿನೋದ್**

---

## ಮುಖಪುಟ: ಗೇರು

ಗೇರು ಇಲ್ಲರೆ ಗೋಡಂಬಿ ತೇಳುವ ಈ ಜಾತಿನ ಗಿಡ ಕೊಡಗು ಮತ್ತೆ ದಕ್ಷಿಣ ಕನ್ನಡ ಜಿಲ್ಲೆಗಲ್ಲಿ ಹೆಚ್ಚಾಗಿ ಕಾಂಬಕೆ ಸಿಕ್ಕಿದೆ. ದಕ್ಷಿಣ ಕನ್ನಡ ಜಿಲ್ಲೆಲಿ ಇದು ಪ್ರಮುಖ ವಾಣಿಜ್ಯ ಬೆಳೆ ಸ ಹೌದು. ದಕ್ಷಿಣ ಅಮೇರಿಕಾದ ಬ್ರೆಜಿಲ್ ದೇಶಂದ ಸುಮಾರ್ 16ನೇ ಶತಮಾನಕ್ಕೆ ಇದ್ ಭಾರತನ ಪ್ರವೇಶಿಸುಟ್ಟು. ಸುರುಗೆ ಹೊಳೆ ಕರೆನ ಮಣ್ಣ್‌ಗ ಕೊಚ್ಚಿ ಹೋಗದಂಗೆ ತಡೆಗೋಡೆ ತರ ಬೆಳ್ದ ಈ ಗಿಡ ಕಡೆಗೆ ಮುಖ್ಯ ವಾಣಿಜ್ಯ ಬೆಳೆ ಆಗುಟು. ಅಲ್ಲದೆ ಇದರ ಹಣ್ಣ್ ಬಾಳಷ್ಟ್ ಔಷದೀಯ ಗುಣಗಳ್ನ ಸ ಹೊಂದುಟು. ಇದರ್ಲಿ ವಿಟಮಿನ್, ಕ್ಯಾಲ್ಷಿಯಂ, ಬೀಟಾ ಕೇರೋಟಿನ್ ಹಂಗೆ ಇನ್ನಷ್ಟ್ ಆರೋಗ್ಯಕರ ಗುಣಗ ಉಟ್ಟು. ಇದರ್ಲಿ ಬ್ಯಾಕ್ಟೀರಿಯಾ ನಿರೋಧಕ ಶಕ್ತಿ ಸ ಬಾಳಷ್ಟ್ ಉಟ್ಟು.

ರಜಾ ದಿನಗಲ್ಲಿ ನಾಡ್‌ಗೆ ಬರುವ ಮಕ್ಕಳ್‌ಗೆ ಗೇರು ಹಣ್ಣು ಬಡ್ಚುದು, ಅದರ ಬೀಜ ಹೆರ್‍ಕುದು, ಒಲೆಗೆ ಹಾಕಿ ಎಣ್ಣೆ ರಟ್ಟಿಸಿಕಂಡ್ ಸುಡ್ಡು, ಕಡೆಗೆ ಕಾಯಿ ಚಿಪ್ಪಿಲಿ ಗುದ್ದಿ ಮಸಿ ಆದರ್ ಬೇಜಾರ್‌ಲಿ ಅರ್ಧ ಕರ್‍ಪಿ ಬಿಸಾಡ್ತು ಎಲ್ಲ ಬಾಲ್ಯದ ನೆನ್ಪುಗ. ಎಲ್ಲಾರ್ ಒಲೆಗೆ ಗೇರ್ ಬೀಜ ಹಾಕಿದೋ ತ ಆದರೆ ಸುತ್ತಲೆಲ್ಲಾ ಗೊತ್ತಾಗುವಷ್ಟ್ ಪರಿಮಳ. ಇಂದ್ ಇದರ್ಲಿ ನಾನಾ ವಿಧಧ ತಳಿಗ ಬಂದುಟು. ಮನೆಯ ಕೌಕೋಲುಗಳಿಗೆ ಗೆದ್ದಲು ಹಿಡಿಯದಂಗೆ ಗೇರು ಎಣ್ಣೆನ ಬಳ್ಸುವೆ. ಹುತ್ತರಿ ಹಬ್ಬದ ದಿನ ಕದಿರ್ ಕಟ್ಟಿಕೆ ಸ ಇದರ ಸೊಪ್ಪು ಬೇಕೇ ಬೇಕು. ಎಲ್ಲ ತರಲೂ ಉಪಯೋಗಕ್ಕೆ ಬರುವ ಮರ ಈ ಗೇರು.

# ಒಂದು ತೊಟ್ಟೆಯ ಕಥೆ

**–ಡಾ ಪುನೀತ್ ರಾಘವೇಂದ್ರ ಕುಂಟುಕಾಡು**

“ಇಂದನಿಯಾ.. ಕತ್ತಲೆ ಇಡೀ ಸರಿ ನಿದ್ದೆನೇ ಇಲ್ಲೆ. ಏನೇನೋ ಕನ್ಸ್. ನಾವ್ ಮಲ್ಗುವ ತಲೆಕಡೆ ಹೊರಗೆ ಮಾಡ್ಂದ ಏನೋ ಕೊಟಕೊಟಾತ ಸದ್ದ್. ಯಾರೋ ಮಾತಾಡಿಕಂಡಾಂಗೆನೂ ಕೇಳ್ತಿತ್ತ್. ನೀವ್ಗೆ ಏನಾರ್ ಗೊತ್ತಾಗುಟ?!” ಹೇಳಿಕಂಡೇ ಗಂಡ ಚಿನ್ನಣ್ಣನ ಬಟ್ಲ್‌ಗೆ ಓಡಿಟ್ಟುನೂ, ಕಡ್ಡೆ ಉಪ್ಪಣದ ಗೈಪುನೈ ಅಳಗೆ ಅಡೀಂದ ಗೋಂಚಿ ಇಕ್ಕಿಕೆ ಹೊರ್ಟೊ ಎಂಕಮ್ಮಕ್ಕ. “ಇಲ್ಲೆಲ್ಲಾ.. ನಂಗೆ ನಿನ್ನೆ ಮಲ್ಗಿದವಂಗೆ ನಿನ್ನ ಅಪ್ಪನ 'ಮಂಗುರ್ಣಿ' ದೆಸೆಂದ, ಕೊಟಕೊಟನೂ ಕೇಳ್ಲೆ!! ಎಂಥದೂ ಇಲ್ಲೆ. ಬೆಳ್ಗಾರ್‌ಗೆ ಒಮ್ಮೆ ನಾ ಉಚ್ಚೆ ಹೊಯ್ಯಕೆ ಎದ್ರ್‌ಕಾಕನ ಅಟ್ಟಲಿ ಎಲಿಗ ಓಡ್ದ್ ಕೇಳ್ತ್. ನಿಂಗೆಲ್ಲೋ ಭ್ರಮೆ!! ಸತ್ತ ನಿನ್ನ ಶಾಲೆ ಮಾವನ ಕೊಲೆ ಬಂದಿರೊಕು!! ನೀ ಎಷ್ಟಾದರೂ ಅವರ ಕೊಂಡಾಟದ ಸೊಸೆ ಅಲ?!!” ಹೇಳಿ ಓಡಿಟ್ಟ್‌ನ ಮುರ್ದ್ ಗೈಪುಗೆ ಕಂತ್‌ಸಿ ತಿಂಬಕೆ ಸುರು ಮಾಡ್ದೊ ಚಿನ್ನಣ್ಣ ಅತ್ತೆ ಮೇಲಿನ ಸಿಟ್ಟ್ ಕೊತ್ತಿ ಮೇಲೆ ತೇಳುವಂಗೆ 'ಇವ್ಕೆ ಎಲ್ಲಾ ಸಸಾರನೇ..' ತ ಗಂಡಂಗೆ ಬೊಯ್ಕಂಡ್ ಒಲೆಲಿದ್ದ ಸೌದೆ ಕೊಳ್ಳಿನ ಸಿಟ್ಟ್‌ಲಿ ಭೊಸ್ಕಂತ ಇನ್ನೂ ಒಳಗೆ ನೂಕಿದೊ. ಒಲೆಲಿದ್ದ ಕೆಂಡದಾಂಗೆ ಕೆಂಪಾದ ಹೆಣ್ಣ್‌ನ ಸುರ್ಪ ನೋಡಿ ಚಿನ್ನಣ್ಣ 'ಸರೀ.. ಬುಡು.. ಇನ್ನೊಮ್ಮೆ ಹಂಗೇನಾದರ್ ಆದರೆ ನೋಡ.. ನಾಳ್ದ್ ಹೆಂಗೂ ಪುತ್ತೂರ್‌ಗೆ ಹೋಕುಟ್ಟು.. ಜೋಯಿಸರೊಟ್ಟಿಗೆ ಕೇಳೊನೊ. ಆತಾ' ಹೇಳಿ ನೆಗಾಡಿಕಂಡ್, ಒಳ್ದ ಉಪ್ಪಣದ ಹೊಡಿ ತುಂಡುನ ಚಪ್ಪಿಕಂಡ್, ಬಟ್ಲ್‌ನ ನೀರಡಿಲಿಸಿ ಕೈತೊಳ್ದ್ ತೋಟಕ್ಕೆ ಹೋದೊ. ಆ ದಿನ ಕತ್ತಲೆಗೂ ಪುನಃ ಅದೇ ಸದ್ದ್ ಕೇಳಿ ಎಚ್ಚರಾದ ಎಂಕಮ್ಮ. ಗೊರೆಳಿತ್ತಿದ್ದ ಗಂಡನ ಕುಟ್ಟಿ ಕುಟ್ಟಿ ಎದ್ರ್‌ಸಿ 'ನೋಡಿ.. ಇಂದ್ ನೂ ಅದೇ ಸೌಂಡ್.. ಹೋಗಿ ನೋಡಿಯಾ.' ಹೇಳ್ದಕ್ಕೆ, ನಿದ್ದೆ ಕಣ್ಣ್‌ಲೇ ಲೈಟ್ ತಕಂಡ್ ಹೋದೊ ಚಿನ್ನಣ್ಣ. ಸೂರಡಿಲಿ ಎಂತದೂ ಕಾಣದಿದ್ದರೂ, ಕೇಳ್ದ ಸದ್ದ್‌ಗೆ ಮಾತ್ರ ನಿದ್ದೆ ಫುಲ್ ಬುಟ್ಟೋತ್. ತಿರ್ಗಿ ಬಂದ್ 'ಸೌಂಡ್ ಕೇಳ್ದು ಹೌದುಯಾ.. ಆದರೆ ಎಂತದೂ ಕಾಂಬೊದ್ಲೆ!! ನಾಳೆ ಬೊಳ್ಪುಗೆ ಬೈನಾಟಿಗೊಂದು ಈಡ್ ತೆಗ್ದಿಸೊನೊ.. ನೋಡ!” ಹೇಳಿ ಜಾರ್ದ ಕಂಬೈನ ಸರಿಮಾಡಿಕಂಡ್ ಅಂಗಾತ ಬಿದ್ದ್ ಕಂಡೊ..

ಮಾರ್ನೆ ದಿನ ಬೊಳ್ಪುಗೆ ಎದ್ರಿಕೆ ಮೊದಲೇ ಚಿನ್ನಣ್ಣನ ಅವ್ವನ ಪರ್ರಂಚಟ ಸುರಾಗುಟು. 'ನಾ ಹೇಳ್ದೆ.. ಆ ಮೂಲೆಲಿ ಸಿಡ್ಲ್ ಬೊಡ್ದ್ ಸತ್ತ ಕೊಟ್ಟೆ ಚಾಳೆನ ತೆಗ್ಲೊಕುತ.. ಇವಂಗೆ ನೋಡ್ರೆ ಯಾಗ ನೋಡ್ರೂ ಪುರ್ಸೊತ್ತಿರಿಕಿಲೆ!! ಊರ್ಲಿದ್ದ ಕೊಟ್ಟುಕುಡ್ತಲೆಗೆಲ್ಲಾ ಅದರ್ಲೇ ಬಂದ್ ಸತ್ತೊತೊ.. ಏನ್ ಬೊಬ್ಬೆ, ಏನ್ ಬೊಬ್ಬೆ!! ಇನ್ನ್ ಆ ಕೊಟ್ಟೆ ಚಾಳೆಗೆ ಯಾವ ರಣ, ಪೀಡೆ ಬಂದ್ ಸೇರಿಕಂಡತೊ? ಕತ್ತಲೆ ಇಡೀ ಅತ್ತನ ಮಾಡ್ ಕರೇಂದ ಕೊಟಕೊಟ ಸದ್ದ್. ಇರ್ಲ್ ಇಡೀ ನಾ ಕಣ್ಣೇ ಮುಚ್ಚಿತ್ಲೆ!! ಓ ಚಿನ್ನಾ.. ಇಂದಾರ್ ಒಮ್ಮೆ ಹೋಗಿ ಆ ನಿನ್ನ ಜೋಯಿಸನೊಟ್ಟಿಗೆ ಕೇಳಿ ಬಾ ಮಾರಾಯಾ..' ಅಯ್ಯೆನ ಸುಪ್ರಭಾತಕ್ಕೇ ಎದ್ದ ಚಿನ್ನಣ್ಣ 'ಆದವ್ವ.. ನಿನ್ನ ಈ ಪರ್ರಂಚನ ಒಮ್ಮೆ ನಿಲ್ಸಿಯಾ' ತೇಳಿ ಹಲ್ಲುಜ್ಜಿ, ಚಾ ಕುಡ್ದ್ ಜೋಯಿಸನಕ್ಕಲೆ ಹೋಗಿ ಎತ್ತಿದೊ. ಸುಮಾರ್ ಹೊತ್ತ್ ಕುದ್ದ್ ಕುದ್ದ್, ಕಡೇಗೆ ಮೂರ್ ಘಂಟೆ ಹೊತ್ತ್‌ಗೆ ಜೋಯಿಸನ ಮುಂದೆ ಕುದ್ರುವ ಭಾಗ್ಯ ಸಿಕ್ಕಿತ್ ಇವ್ಕೆ. ಜೋಯಿಸನೂ ಕವ್ಡೆ ಹಾಕಿ, ಕೂಡ್ಸಿ, ಕಳ್ದ್.. ಬರ್ದದರ ಮೇಲೇ ಮೂರ್ ಮೂರ್ ಸರ್ತಿ ಗೀಟ್ ಹಾಕಿದರ್ಲಿ ಆ ಪೇಪರೇ ಒಟ್ಟೆ!! 'ನೋಡಿ ಚಿನ್ನಣ್ಣಾ.. ನಿಮ್ಮ ಮನೆಗೆ ಛಿದ್ರ ದೋಷ ಆಗುಟು. ನೀರಡಿ ಕೊಟೆಗೆ ಹಕ್ಕಲೆ ತಗ್‌ಡ್, ಕುಪ್ಪಿಲಿ ಮೊಸಿ ತುಂಡ್ ಮನಿ ಏನಾರ್ ಸಿಕ್ಕಿದ್ ನೆನ್ಪುಟ್ಟಾ?.. ನೆರೆಕರೆಯವರೊಟ್ಟಿಗೆ ನಿಷ್ಠುರ, ಕುಟುಂಬಲಿ ಒಳಜಗಳ ಏನಾರ್...' 'ನೆರೆಕರೆಯವರ ಜಗಳ ನಾಯಿ, ಕೋಳಿಗಳಿಗೆ ಯಾಗೋಳು ಇದ್ದದೇ. ಕುಟುಂಬಗಳ

ಜಗಳ, ಕೋಮಣ ಜಿಡ್ಡ್ ಹೋಗುವಂಥದ್ದಲ್ಲ!! ಆದರೂ ಯಾರೂ ಮಾಡಿರಿಕಿಲೇಂತ ಹೇಳಿಕೆ ಆಕಿಲೆ. ಅಂಥಾ ಕೊರ್ಸಂಡಿ, ಕಣ್ಣೋಜಿ, ನಂಜಿ ಕಾರಿಕಂಡಿರವೇ ನಮ್ಮಲ್ಲಿ ಒಳದ್. ಇದ್ ಯಾರ್ ಮಾಡಿರುವೊತ ಒಮ್ಮೆ ಪ್ರಶ್ನೆಲಿ ನೋಡಿ? ಹಂಗೇ ಇದ್ಕೆ ನಿಮೂರ್ತಿ ಎಂಥ ಜೋಯಿಸರೇ?' 'ನೋಡಿ ಚೆನ್ನಣ್ಣಾ.. ಯಾರ್ ಮಾಡ್ದೋತ ಬೇಡ. ಮತ್ತೆ ಅದ್ ಇನ್ನಷ್ಟ್ ಜಗಳಕ್ಕೆ ದಾರಿ. ಅಷ್ಟಕ್ಕೂ ಇದ್ ನಿಮೂರ್ತಿ ಮಾಡಿಕೆ ಆಗದ ಸಮಸ್ಯೆ ಏನೂ ಅಲ್ಲಲ್ಲ?? ಒಂದ್ ಸಣ್ಣ ಬುಟ್ಟ್ ನಾಳ್ದ್ ನಂಗೆ ಚೂರು ಪುರ್ಸೊತ್ತು ಉಟ್ಟು.. ಅದೇ ದಿನ ಆದು. ಹೊರಗೆ ಹೈದ ನೀವ್ಗೆ ಸಾಮಾನ್ ಚೀಟಿ ಕೊಟ್ಟದೆ. ಆಕಿಲೆನಾ?' ಜೋಯಿಸಂಗೆ ಕಾಣಿಕೆ ಇಸಿ, ಹೈದ ಕೊಟ್ಟ ಚೀಟಿನನೂ ತಕಂಡ್ ಚೆನ್ನಣ್ಣ ಮನೆಗೆ ಎತ್ತ್‌ಕಾಕನ ನಡುರಾತ್ರಿ. ನೋಡ್ರೆ ಸದ್ದ್ ಆತ್ರ ಚೂರು ಕಮ್ಮಿ.. ಆಗೊಮ್ಮೆ. ಈಗೊಮ್ಮೆ ಅಷ್ಟೆ!!

ಅಂತೂ ಜೋಯಿಸ ಹೇಳ್ದ ಸಾಮಾನ್‌ಗಳೆಲ್ಲಾ ತಂದ್ ಮನೆಲಿಸಿ ಕಳ್ದ್ ತೆಗೆಯಕೆ ಎಲ್ಲವೂ ಕಾದ್ ಕುದ್ದೊ. ಯಾರಿಗೂ ಗೊತ್ತಾಕೆ ಬೊತ್ತ್‌ತ ಯಾರಿಗೂ ಹೇಳ್ತ್‌ಲೆ. ಆದರೂ ಎಂಕಮ್ಮಕ್ಕ ಮಾತ್ರ ಅವರ ತವ್ರ್ ಮನೆಗೆ ಹೇಳಿ ಅಪ್ಪ ಬಾಕೆ ಮಾಡಿಕಂಡೊ. 'ಹಿಂಬತ್ತ್ ನಾಕ್ ಘಂಟೆಗೇ ಬನ್ನೆ' ತೇಳ್ದ ಜೋಯಿಸರ್ ಬಂದ್ ಎತ್ತ್‌ಕಾಕನ ಘಂಟೆ ಎಂಟ್! ಬಂದ ಹಾಂಗೇ ಮಂಡಲ ಹಾಕಿ, ಕಾಯಿ ಗಡಿಲಿ ನೆಣೆ ಬತ್ತಿ ಇಸಿ ಕೆಲ್ಸ ಎಲ್ಲಾ ರಪರಪ ಮಾಡಿ ಮುಗ್ಸಿದೊ. ಕಡೆಗೆ ಒಂದ್ ಹೂಂಜನನೂ ತಲೆಕೊಯಿದ್, ಒಟ್ಟಿಗೆ ಬಂದ ಹೈದನೊಟ್ಟಿಗೆ ಬ್ಯಾಗ್‌ಗೆ ತುರ್ಕಿ ಇಸಿಕಂಡೊ!! ಎಲ್ಲರ ಎದ್ರ್‌ಸಿ ನಿಲ್ಸ್‌ಸಿ 'ಮನೆದೇವ್ರ, ಗ್ರಾಮದೇವ್ರ, ಸೀಮೆ ದೇವ್ರ ನೆನ್ಸಿಕಂಡ್.. ಮೀದ ನೀರ್‌ಲ್ಯಾಗಲಿ, ಉಟ್ಟು ಬಟ್ಟೆಲ್ಯಾಗಲಿ, ಹೊಯ್ದ ಎಣ್ಣೆಲಾಗಲಿ. ಹೊತ್ತ್‌ಸಿದ ಬತ್ತಿಲ್ಯಾಗಲೀ, ಹಾಕಿದ ಮಂಡಲಲ್ಯಾಗಲೀ, ಕೊಯ್ದ ಕೋಳಿಲ್ಯಾಗಲಿ ಏನಾರೊಂದು ಕುಂದುಕೊರತೆ ಬಂದಿರ್ದ್ರ್. ಅದರೆಲ್ಲಾ ಮಾಪ್ ಮಾಡಿ, ಆಗಿರುವ ದೋಷಕಾರ್ಯಕ್ಕೆ ಸಂಪೂರ್ಣ ನಿಮೂರ್ತಿ ಮಾಡಿ ಕೊಡಕುತ ನಮ್ಮೆಲ್ಲರ ಪ್ರಾರ್ಥನೆ' ಹೇಳಿ ಕರೆಲಿ ಹಾಳೆ ಕಿಳ್ಳಿಲಿದ್ದ ಕುರ್ದಿ ನೀರ್‌ನ ಎಲ್ಲವ್ಕೂ ಸಿಡ್ಕಿದೊ ಜೋಯಿಸರ್. 'ಲೈಟ್ ಹಿಡ್ಕಂಡ್ ಬನ್ನಿ ಚೆನ್ನಣ್ಣಾ.. ಕುರ್ದಿ ನೀರ್‌ನ ಮನೆ ಸುತ್ತ ಚೋಂಪೊಕು. ಪೋಯಿ' ತ ಮನೆವರ ಕರ್ಕಂಡ್ ಹೊರ್ಟೊ. ಹೋಕನ ಕೊಟ್ಟೆ ಚಾಳೆನ ಕಡೆ, ಮನೆನ ಮಾಡ್‌ನ ಸೂರಡಿ ದಂಬೆ ಕರೆಲಿ ಬಿಳೀ ತೊಟ್ಟೆಲಿ ಕಟ್ಟಿಕಂಡ್ ಏನೋ ನೇಲ್ದೆ. ಅದರ ನೋಡಿ 'ನೋಡ್ದರಿಯಾ ಚೆನ್ನಣ್ಣಾ.. ಮಾಡಿ ಮೊಡ್ಗಿದ್ ಇಲ್ಲ್ಯಟ್ಟು!! ಇಷ್ಟ್ ದಿನ ನೀವ್ಗೆ ಕಂಡೆತೇಲೆ!! ಈಗ ಹೊರಗೆ ಬಾತ್ ನೋಡಿ. ಇದರ ಹಂಗೇ ಬರೇ ಕೈಲಿ ಬಿಸಾಡ್ದಲ್ಲ. ಕಟ್ಟಿ ಕೊಟ್ನೆ. ತಕಂಡೋಗಿ ಹರಿವ ನೀರ್‌ಲಿ ಬುಟಿ. ಚೋಡಿಲಿ ಆದರೂ ಆದು.' ಹೇಳ್ದ ಜೋಯಿಸ ಅವಂನ ಬಿಲ್ಲ್ ಚುಕ್ತಾ ಮಾಡಿಕಂಡ್, ಕೊಯ್ದ ಕೋಳಿನನೂ ತಕಂಡ್ ಹೋತ್. ಆದಿನ ಕತ್ತಲೆಗೆ ಎಂಥ ಸೌಂಡೂ ಇಲ್ಲೆ. ಎಲ್ಲವೂ ನೆಮ್ಮದಿಂದ ನಿದ್ದೆ ಮಾಡ್ದೊ. ಮಾರ್ನೆ ದಿನ ಬೊಳ್ಪುಗೆ ನೋಡ್ರೆ, ಕೆಲ್ಸಕ್ಕೆ ಮಾಂಕು ಬಿಳಿ ತೊಟ್ಟೆ ಸಿಕ್ಕಿದ ಜಾಗೆಲಿ ಎಂಥದೋ ಪುರ್ಡಿದೆ. ಅದರ ನೋಡ್ದ ಎಂಕಮ್ಮಕ್ಕ 'ಓ ಮಾಂಕು. ನೀ ಎಂಥ ಅಲ್ಲಿ ಹುಡ್ಕುದು? ಅಲ್ಲಿ ನಿನ್ನೆ ಛಿದ್ರದೋಷದ ಸಾಮಾನ್ ಸಿಕ್ಕಿತ್. ನೀನೇ ಏನಾರ್ ತಂದಿಸಿದಾ ಹೆಂಗೆ? ಸೊಯೆ ಇಲ್ಲದಂವ.. ನಿನ್ನ ಹುಲಿ ಹಿಡ್ಯಕೆ..' 'ಅಯ್ಯೋ ಎಂಕಮ್ಮಕ್ಕ. ನಂಗೇನ್ ಮೊರ್ಲಾ.. ಗಂಜಿ ಉಂಬ ಮನೆಗೆ ಮಾಡಿ ಮೊಡ್ಗಿಕೆ. ಮೊನ್ನೆ ಗೊಬ್ಬರ ಎಳ್ಯಕೆ ಬಂದಿರ್ಕಾಕನ, ನೀವ್ ಕಿಚ್ಚಿ ಹಾಕಂಬಕೆ ನಾಕ್ ತುಂಡ್ ಚರ್‌ಂಡಿ ಮೀನ್ ಕೊಟ್ಟಿದ್ದರಿ ನೋಡಿ. ಇನ್ನೊಮ್ಮೆಗೆ ಆದೂಂತ ಬಿಳಿ ತೊಟ್ಟೆಲಿ ಕಟ್ಟಿ ಇಸಿದ್ದೆ. ಕೆಳಗಿಸಿರೆ ಈ ಎಲಿ, ಕೊತ್ತಿ ಹೊರ್ದೂತ ಇಲ್ಲಿ ಸೂರಡಿಲಿ, ದೊಂಬೆ ಸೆರೆಲಿ ಹುಗ್ಗ್‌ಸಿ ಇಸಿದ್ದೆ. ಕತ್ತೆಲೆಗೆ ಎಲಿಗಳೋ, ಹೆಗ್ಗಣನೋ ಬಂದ್, ಎಳ್ದ್–ಜಾರ್ಸಿ ಹೊರಗೆ ತೆಗ್ದೊರೊಕು. ಅದರ ಪಡೆ ಮುತ್ತಿಕೆ!!' ಹೇಳಿ ನೆಗಾಡಿಕಂಡ್ ಅಡ್ಕೆ ಚೊಲ್ಲಿಕೆ ಹೋತ್..

## ಕೂಸುನ ಮಾತ್

**–ಎಂ.ಜಿ. ಕಾವೇರಮ್ಮ**

ಮೂರ್ ವರ್ಸದ ಆ ಕೂಸು ಪಟಪಟಾಂತ
ಹೊದ್ರಿ ಹೊಟ್ಟಿದಾಂಗೆ ಮಾತಾಡ್ತಿತ್ತ್
ಒಂದಿನ ಅವರ ಮನೆಗೆ ಪಕ್ಕದ ಮನೆ ಗಿರೀಶ ಬಾತ್
"ಅವ್ವಾ, ಅವ್ವಾ ಪಕ್ಷದ ಮನೆ ಗಿರೀಶ ಬಾತ್"
ಕೂಸು ಒಳಗಿದ್ದ ಅವ್ವನ ಕರ್ದ್‌ದ್ ಹೇಳ್ತ್.
ಅಡ್ಗೆ ಕೋಣೆಲಿ ಹಿಟ್ಟ್ ಎಳ್‌ಕ್‌ಸ್‌ತಿದ್ದ ಅದರ
ಅವ್ವ ಬಂದ್‌ದ್ ಹಿಟ್ಟ್‌ನ ಸಟ್ಟ್‌ಗಲಿ ಕೂಸುನ
ತಲೆಗೆ ಹೆಟ್ಟಿ
"ಕಂದ್ರಕುಟ್ಟಿ, ದೊಡ್ಡವರ ಹೆಸ್ರ್ ಹಿಡ್ದ್
ಕರ್ದವೆನೊ?" ಎಂತ ಹೇಳ್ತ್. ತನ್ನ ಕುಂಞಿ
ಕೈಯಿಂದ ತಲೆನ ಪೂಜಿಕಂಡ್ ಗಿರೀಶನ ನೋಡಿ,
"ನಿಮ್ಮ ಅಪ್ಪ ನಿಮ್ಮ ಹೇಂಗೆ ಕರ್ಯೊದ್?" ಎಂತ ಕೇಳ್ತ್
"ಗಿರೀಶ"
"ನನ್ನ ಅಪ್ಪ ನಿಮ್ಮ ಹೇಂಗೆ ಕರ್ಯೊದ್?"
"ಗಿರೀಶ"
ಮತ್ತೆ ನಾ ಮಾತ್ರ ನಿಮ್ಮ ಗಿರೀಶಂತ ಕರ್ದರೆ ಅವ್ವ
ನಂಗೆ ಏಕೆ ತಲೆಗೆ ಹೆಟ್ಟುವೆ?"
ಗಿರೀಶಂಗೆ ಕೂಸುನ ಕೊಂಡಾಟದ ಮಾತ್‌ನ
ಕೇಳಿ ಏನ್ ಹೇಳ್ದುಂತ ಗೊತ್ತಾತ್ಲೆ
ಅದರ ಅವ್ವಂಗೂ ಕೂಸುನ ಮಾತ್ ಕೇಳಿ
ನೆಗೆ ಬಾತ್. ಅದ್ ಹಿಟ್ಟ್‌ನ ಸಟ್ಟ್‌ಗನ
ಕೈಯಿಂದ ಹೆರ್ಕಿ ಇಟ್ಟ್ ಕೊಂಡಾಟಲಿ ಕೂಸುನ
ತೊಬ್ಬಿಕಂಡ್ ಅದರ ಕೆಪ್ಪೆಗೆ ಮುತ್ತ್ ಕೊಟ್ಟ್‌ದ್
"ಅಯ್ಯೋ ನನ್ನ ಬಂಗಾರ, ಹಾಂಗೆಲ್ಲಾ
ದೊಡ್ಡವರ ಹೆಸ್ರ್ ಹಿಡ್ದ್ ಕರ್ಯಕಾಗದ್
ಸಣಪಾ, ಬಾವಾ ಎಂತ ನೇರ ಹಿಡ್ದ್ ಕರ್ಯೊಕು ಬಲಾ?"
ಎಂತ ಹೇಳ್ತ್.
ಕೂಸು ಒಮ್ಮೆ ಅವ್ವನ ಮೋರೆನ ಮತ್ತೆ ಒಮ್ಮೆ
ಗಿರೀಶನ ಮೋರೆನ ನೋಡಿ, ನೆಗಾಡಿಕಂಡ್ ತಲೆ
ಹಂದಾಡ್ಸಿ, ಇಜ್ಜೆಲ್‌ಲಿ ಇದ್ದ ಕೋಳಿಗಳ ನೋಡಿ,
ಅದರ ಹಿಡ್ಯಕೆ ಓಡ್ತ್.

## ಅಮ್ಮನ ಕಥೆ

ಮನೇಲಿ ಅಮ್ಮ ಒಬ್ಬನೆ ಇರ್ದು
ಈಗ ಪ್ರಾಯನೂ ಆತ್
ಕಾಲ್ ಗಂಟ್ ಬೇನೆ ಸೊಂಟನೂ ಬೇನೆ
ಯಾರ ಒಟ್ಟಿಗೆ ಹೇಳ್ದು
ಅಪ್ಪನೂ ತೀರಿ ಹೋಗೊಳೊ
ನಾನು ತಮ್ಮಂದಿರು ಸೇರಿ ಮೂರುಮಕ್ಕ
ದೊಡ್ಡಂವ ಕೆಲ್ಸಲಿ ಬೆಂಗ್ಳೂರುಲುಟ್ಟು
ಮತ್ತೊಬ್ಬ ಅದು ಇದು ಓದಿಟ್ಟು
ಸಂಘ ಸಂಸ್ಥೆ ಜೋಸ್ತಿಗತ ಮನೇಲುಟ್ಟು
ಮನೇಲಿ ಅಡ್ಕೆ ತೋಟನೂ ಉಟ್ಟು
ಹಟ್ಟಿಲಿ ನಾಲ್ಕು ದನಗಳೂ ಒಳೊ
ಇದರ ಕೆಲ್ಸ ಅಮ್ಮ ಒಬ್ಬನೇ ಮಾಡೋಕು
ಸಣ್ಣವ ಮನೇಲಿ ಕೈಲಿ ಹಿಡ್ದ ಕೆಲ್ಸ ಮಾಡ್ದುಲೆ
ಹೊತ್ತು ಹೊತ್ತುಗೆ ಅಮ್ಮ ಅಡ್ಗೆ ಮಾಡ್ರೆ ಇಳ್ಸಿದೆ
ತಿಂದ್ ಕಣ್ಣ್‌ಮುಚ್ಚಿ ಕುದುಕಂದೆ
ಏನಾರ್ ಓದಿದೆ ಬರ್ದದೆ
ಮೊದುವೆ ಆಗ್‌ತ ಹೇಳ್ರೆ ಆದುಲೆ
ನಾ ಇರ್‌ಕನ ಅಮ್ಮಂಗೆ ಲಾಯಿಕ್ ಆತ್ತಿತ್
ನಾ ಬಾಕನ ಮತಡಿಕೆ ಲಾಯಿಕ್ ಆದೆ
ತಮ್ಮಂದರ ದೂರಿ ಕಣ್ಣೀರಿಸಿವೆ
ಇದ್ ಅವುಕೆ ಎಲ್ಲಿ ಕೇಳ್ದೆ
ಬೇನೆಕಾಲ್ ಎಳ್‌ಕಣ್
ಮೊಡ್‌ಪಳೆ ಇಸಿಕಣ್
ತೋಟಕ್ಕೆ ಹುಲ್ಲಿಗೆ ಹೋದವೆ
ತಮ್ಮ ಕುದ್ದುಕಣ್ ಕಿಡಿಕೆಲಿ ನೋಡ್ದೆ
ತಮ್ಮಂದರ ನೋಡ್ಕನ ಸಿಟ್ಟು ಬಂದದೆ
ನಂಗೆ ಗಂಡನ ಮನೇಲಿ ಬೇಕಾದಷ್ಟು ಕೆಲ್ಸ ಉಟ್ಟು
ಅಮ್ಮನ ನೋಡಿ ಆಗಾಗ ಬಾದು
ನಾ ಬಾಕನ ತಮ್ಮ ಲಾಯಿಕ್ ಮಾತಡ್ದೆ
ಗಮ್ಮತ್ತು ಮಾಡ್ದೆ, ಅಡ್ಕೆ ಮಾರ್ದೆ
ನನ್ನ ಮಗ್ಳ್ ಓಡಿ ಬಂದು
ಅಮ್ಮಾ ಅಮ್ಮ ಅಂತ ಕರ್ದ್
ನನ್ನ ಕುತ್ತಿಗೆಗೆ ಕೈ ಹಾಕಿ ಬೊಗ್ಗಿಸಿ
ಮಾವ ಎಂತದೋ ಬರ್ದದೆಂತಾ
ನನ್ನ ಕೆಬಿಲಿ ಗುಟ್ಟುಲಿ ಹೇಳ್ದೆ

# ಏಕಾಂಗಿ ಯಾನಲಿ

**–ಆಶಿತ ಚೆಮ್ನೂರು**

ಒಂದು ಊರ್‌ಲಿ ಒಂದು ದಂಪತಿ ಇದ್ದವೆ. ಅವ್ಕೆ ಸುರುನ ಕೂಸು ಹೆಣ್ಣ್ ಆಗಿದ್ದದೆ. ಆದರೆ ಆ ಯಜಮಾನಂಗೆ ಗಂಡು ಕೂಸು ಬೇಕುತ ಆಸೆ ಆದೆ. ಆದರೆ ರಾಘವೇಂದ್ರ ದೇವರ ಮೊರೆ ಹೋದವೆ, ಆಗ ಒಂದು ಗಂಡ್ ಕೂಸ್ ಹುಟ್ಟಿದೆ. ಅವ್ಕೆ ಬಾಳ ಕುಸಿ ಆದೆ. ಆ ಕೂಸಿಗೆ 'ಪ್ರೀತಮ್'ತ ನಾಮಕರಣ ಮಾಡುವೆ. ಪ್ರೀತಂನ ತುಂಬಾ ಲಾಯ್ಕಲಿ ಸಾಕುವೆ. ಐದನೇ ವರ್ಷಲಿ ಶಾಲೆಗೆ ಸೇರಿಸುವೆ ಲಾಯ್ಕಲಿ ಓದಿಕಂಡ್ ಬಂದದೆ. ಪಿಯುಸಿಗೆ ಬೇರೆ ಕಡೆ ಕಾಲೇಜ್‌ಗೆ ಹೋಗ್ತಾ ಇದ್ದದೆ. ಅದೆಂಗೋ ದ್ವಿತೀಯ ಪಿಯುಸಿಲಿ ಡುಮ್ಕಿ ಹೊಡ್ದದೆ. ಮನೆಲಿ ತುಂಬಾ ಕಿರುಕುಳ, ಆಚೆ ಮನೆ ಈಚೆ ಮನೆ ಎಲ್ಲಾ ಕಡೆಂದ ತುಂಬಾ ಮಾತ್ ಕೇಳಿ ಸುಮಾರ್ ಒಂದ್ ವರ್ಷ ಮನೆಲಿ ಇತ್ತ್. ಅವನ ಆಸೆ ಬೈಯೋಟೆಕ್ ಮಾಡಕು ತ, ಆದರೆ ಅವಂಗೆ ಅದು ಮಾಡಿಕೆ ಆದುಲೆ. ಕಡೆಗೆ ಅಪ್ಪನ ಮಾತಿಗೆ ಕಟ್ಟುಬಿದ್ದ್ ಅವರ ಆಸೆನಂಗೆ ಡಿಪ್ಲೊಮೊ ಎಲೆಕ್ಟ್ರಿಕಲ್ ಸೇರ್ದೆ. ಅಲ್ಲಿಗೆ ಸೇರ್ದ ಮೇಲೆ ಅಲ್ಲಿನವ್ಕೆ ಅವನೆ ಸರಿಯಾಗಿ ಹೊಂದಾಣಿಕೆ ಆಗಿ ಓದುದರ್‌ಲಿ ಅಲ್ಲದೆ, ಗೂಡೆಗಳ ಚುಡಾಯಿಸುದು, ರೇಗಿಸುದು, ಗಲಾಟೆ ಮಾಡ್ದರ್‌ಲಿ ಸ ಮುಂದೆ ಇತ್ತ್. ಗಾಂಧಿ ತರ ಇದ್ದ ಹೈದ ತೀರಾ ಬದಲಾತ್. ಅವಂಗೆ ಅಲ್ಲಿ ನಾಲ್ಕ್ ಜನ ಗೆಳೆಯರ್ ಆದವೆ. ಡಿಪ್ಲೊಮೋ ಎರಡನೇ ವರ್ಷಕ್ಕೆ ಬಾಕನ ಅವನ ದೋಸ್ತ್ ಅಭಿಗೆ ಜೂನಿಯರ್ ಗೂಡೆ 'ಚೇತನ'ನ ಮೇಲೆ ಪ್ರೀತಿ ಹುಟ್ಟಿದೆ. ಅವನ ಪ್ರಿತಿ ಉಳ್ಸಿಕೆ, ಆ ಗೂಡೆನ ಕೈಲಿ ರಾಖಿ ಕಟ್ಟಿಸಿಕಂಡ್ ಅಣ್ಣನಾಗಿ ತುಂಬಾ ಸಹಾಯ ಮಾಡ್ದೆ, ಆ ಗೂಡೆನ ಬೇರೆ ಯಾರಾದ್ರ್ ರೇಗಿಸಿರೆ ಜಗಳ ಮಾಡ್ತಾ ಇತ್ತ್.

ಒಮ್ಮೆ ಊರ್ ಹಬ್ಬಕ್ಕೆ ಚೇತನನ ಮನೆಗೆ ಅಭಿ ಮತ್ತೆ ಪ್ರೀತಮ್ ಹೋದವೆ. ಅಲ್ಲಿ ಚೇತನಳ ಗೆಳತಿಗ ಇಬ್ಬರ್ ಬಂದಿದ್ದವೆ. ಅದರ್‌ಲಿ ಒಬ್ಬಳ್ 'ಪ್ರೀತಿ'ತ. ಪ್ರೀತಿ ಮೇಲೆ ಪ್ರೀತಮ್ ಗೆ ಪ್ರೀತಿ ಆಗಿ ತುಂಬ ಖುಷಿ ಪಟ್ಟದೆ. ಅಂವ ಕನ್ಸ್‌ಲಿ ತೇಲಾಡಿಕಂಡ್ ಇರ್ಕನ ಚೇತನನ ಅಮ್ಮ ಊಟಕ್ಕೆ ಕರ್ದವೆ. ಊಟಕ್ಕೆ ಪ್ರೀತಮ್ ಮತ್ತು ಪ್ರೀತಿ ಒಟ್ಟಿಗೆ ಕುದ್ದ್‌ಕಂಡ್ ಊಟ ಮಾಡ್ಕನ ಪ್ರೀತಮ್‌ಗೆ ಸ್ವರ್ಗನೇ ಎದುರು ಬಂದಂಗೆ ಆದೆ, ಆ ದಿನ ಅವರ ಮನೆಲಿ ನಿತ್ತವೆ, ಕತ್ತಲೆ ಆದಂಗೆ ನಿದ್ದೆನೇ ಬಾದುಲೆ. ಅವಳ ನೆನಪುಲಿ ತೇಲಾಡಿಕಂಡ್ ಇದ್ದದೆ. ಬೊಳ್ಪುಗೆ ಎದ್ದ್ ದೇವಸ್ಥಾನಕೆ ಹೋದವೆ. ಆಗ ಪ್ರೀತಿ ಮತ್ತೆ ಪ್ರೀತಮ್ ಒಟ್ಟಿಗೆ ಹೋಕನ ಅಭಿ ಮತ್ತೆ ಚೇತನ ಅವ್ಕೆ ರೇಗಿಸಿಕಂಡ್ ಇದ್ದವೆ. ದೇವಸ್ಥಾನಂದ ಅವರವರ ಮನೆಗೆ ಹೋಕೆ ಬಸ್‌ಗೆ ಕಾದ್‌ಕಂಡ್ ಇದ್ದವೆ ಆಗ ಪ್ರೀತಿ ಹೇಳ್ದೆ ನೀ ಇಳಿಬಡ ಇಂದ್ ಚೇತನನ ಅಣ್ಣನ ಮನೆಗೆ ಪೋಯಿ. ನಾಳೆ ನಾವು ಎಲ್ಲವೂ ನಮ್ಮ ನಮ್ಮ ಮನೆಗೆ ಪೋಯಿ ತ ಹೇಳ್ತ್. ಎಲ್ಲವೂ ಚೇತನನ ಅಣ್ಣನ ಮನೆಗೆ ಹೋದವೆ, ಅವರ ಮನೇಲಿ ಖುಷಿಲಿ ಪಾರ್ಟಿ ಮಾಡ್ಕಂಡ್ ಇದ್ದವೆ. ಮಾರನೇ ದಿನ ಎಲ್ಲವೂ ಅವರವರ ಮನೆಗೆ ಹೋದವೆ.

ಒಂದ್ ತಿಂಗಳ ಕಾಲ ಪ್ರೀತಿ ಮತ್ತೆ ಪ್ರೀತಮ್‌ಗೆ ಯಾವುದೇ ಸಂಪರ್ಕ ಇರ್ದುಲೆ. ಪ್ರೀತಂ ಅವನ ಪ್ರೀತಿನ ಅಭಿನೊಟ್ಟಿಗೆ ಹೇಳ್ಕನ, ಅವ ಎಂತ ಹೇಳ್ದೆ ಗೊತ್ತುಟ? ಅವಳು ನಿನ್ನ ಇಷ್ಟ ಪಟ್ಟದ್ ಅಲ್ಲ ನನ್ನ ಇಷ್ಟ ಪಟ್ಟದ್ ತ ಅಷ್ಟೊತ್ತಿಗೆ ಅಭಿ ಮತ್ತೆ ಚೇತನರ ಮಧ್ಯೆ ಪ್ರೀತಿ ಇರ್ದುಲೆ. ಪ್ರೀತಂ ಅಭಿನ ಮಾತ್ ಕೇಳಿ ತುಂಬಾ ಬೇಜಾರಾದೆ. ಆ ವಿಷಯನ ಅಲ್ಲಿಗೆ ಬುಟ್ಟದೆ ಆದರೆ ಅಭಿ ಮೆಲ್ಲ ಆ ಗುಂಪುಂದ ಹೊರಗೆ ಹೋದೆ. ಕೊನೆಗೆ ಡಿಪ್ಲೊಮೊ ಮುಗ್ದದೆ.

ಆಮೇಲೆ ಪ್ರೀತಮ್ ಇಂಜಿನಿಯರಿಂಗ್ ಕಾಲೇಜಿಗೆ ಸೇರ್‌ದೆ. ಆ ಕಾಲೇಜ್‌ಲಿ ಮೊದಲೇ ಅವನ ತಮ್ಮ ಓದಿಕಂಡ್ ಇದ್ದದೆ. ಅದಿಕೆ ಪ್ರೀತಮ್‌ಗೆ ಆ ಕಾಲೇಜ್‌ಗೆ ಗೊತ್ತಿದ್ದದೆ. ಸುರುನ ದಿನ ಕಾಲೇಜ್‌ಗೆ ಹೋಕನ ಒಂದ್ ಗೂಡೆನ ನೋಡಿ ಅವಳ ಮೇಲೆ ಪ್ರೀತಿ ಆದೆ. ಆಗಳೇ ಅವಳ ಬಗ್ಗೆ ಬೇರೆಯವರೊಟ್ಟಿಗೆ ವಿಚಾರ್ಸಿ ನೋಡ್ಕನ ಅವ್ಳು ಬೇರೆ ಜಾತಿಂತ ಗೊತ್ತಾದೆ. ಅಲ್ಲಿಗೆ ಅವಳ ನೋಡ್ದು ನಿಲ್ಲಿಸಿದೆ. ಓದಿದ ಕಡೆ ಲಾಯಿಕಲಿ ಗಮನ ಕೊಟ್ಟು ಒಳ್ಳೆ ಮಾರ್ಕ್ಸ್ ತಗಂಡದೆ ಏಳನೇ ಸೆಮಿಸ್ಟರ್‌ಗೆ ಬಾಕನ ಟೂರ್‌ಗೆ ಹೋದವೆ. ಆಗ ಒಂದ್ ಗೂಡೆಗೆ ಹುಷಾರಿಲ್ಲದಂಗೆ ಆದೆ, ಅವಳ ಆಸ್ಪತ್ರೆಗೆ ಕರ್‌ಕಂಡ್ ಹೋದೆ, ಪ್ರೀತಮ್‌ಗೆ ಅವಳ ಮೇಲೆ ಪ್ರೀತಿ ಹುಟ್ಟಿದೆ. ಆದರೆ ಅವಳು ಒಳ್ಳೆ ಫ್ರೆಂಡ್ ಆದೆ. ಅವಳೇ ಪ್ರಾಜೆಕ್ಟ್ ಜೊತೆಗಾರ್ತಿ ಆದೆ. ಎಂಟನೇ ಸೆಮಿಸ್ಟರ್‌ಲಿ ಅವಳಿಗೆ ಎಂಗೇಜ್‌ಮೆಂಟ್ (ವೀಳ್ಯಶಾಸ್ತ್ರ) ಆದೆ. ಆಗಲೂ ಪ್ರೀತಮ್‌ಗೆ ಬೇಜಾರಾದೆ. ಕೊನೆಗೆ ಇಂಜಿನಿಯರಿಂಗ್ ಮುಗ್ಸಿ ಒಳ್ಳೆ ಸಂಸ್ಥೆಲಿ ಕೆಲ್ಸ ಮಾಡ್ತಾ ಇದ್ದದೆ. ಅಲ್ಲಿ ಅವಂಗೆ ನಾಲ್ಕ್ ಜನ ಫ್ರೆಂಡ್ಸ್ ಆದವೆ. ಯಾರಿಗೆಸಾ ಮದುವೆ ಆಗಿರ್‌ದುಲೆ. ಯಾಗೋಳು ಒಟ್ಟಿಗೆ ಸೇರಿ ಮದುವೆ ವಿಷಯಗಳ ಮಾತಾಡಿಕಂಡ್ ಯಾರಿಗೆ ಬೇಗ ಮದುವೆ ತ ಸ್ಪರ್ಧೆಲಿ ಇದ್ದವೆ. ಇದುವರೆಗೂ ಯಾರಿಗೆಸ ಮದುವೆ ಆತ್ಲೆ. ಪ್ರೀತಮ್ ಅಂತೂ ತುಂಬಾ ಬೇಜಾರ್‌ಲಿ ಕುಡಿಯದಿದ್ದರೆ ಸಾಕ್ ತ ನಾಲ್ಕ್ ಜನ ದೇವರ ಹಕ್ಕಲೆ ಪ್ರಾರ್ಥನೆ ಮಾಡ್ತಾ ಇದ್ದವೆ. ಆಗ ಆ ಆಫೀಸ್‌ಗೆ ಒಂದ್ ಹೊಸ ಗೂಡೆ ಪ್ರವೇಶ ಆದೆ, ಆಗ ಪ್ರೀತಮ್‌ಗೆ ಬಾಳ ಖುಷಿ ಆದೆ.

## ಧನಿಕನ ಪರಿಸ್ಥಿತಿ

**–ಡಬ್ಲೂ. ಎಂ. ದೇವಕಿ**

ಒಂದ್ ಊರ್‌ಲಿ ಒಬ್ಬ ಧನಿಕ ಇತ್ತ್. ಇವನ ಹೆಸರ್ ಕಾಳಪ್ಪ, ಹೆಣ್ಣ್‌ನ ಹೆಸ್ರ್ ಕಾಳವ್ವ. ಇವ್ಕೆ ಎರಡ್ ಗಂಡ್ ಒಂದ್ ಹೆಣ್ಣ್ ಮಕ್ಕ ಇದ್ದೊ. ದಂಪತಿಗಳಿಗೆ ಹೆಚ್ಚ್ ಆಸ್ತಿ ಇತ್ತೆ. ಆಸ್ತಿಲಿ ಅವೇ ದುಡ್ದ್ ಕುಡ್ದ್ ತಿಂದ್ ಬರೋ ದುಡ್ಡ್‌ನ ಕೂಡಿಸಿ ಮಡ್ಗಿದೊ. ಮಕ್ಕಳಿಗೆ ಯಾವ ಕೆಲ್ಸ ಬೆಸಗೆನ ಕಲ್ಸಿತ್ತೆ. ಆದರೆ ಮಕ್ಕಳಿಗೆ ಕೆಲ್ಸದ ವಿವರನು ಗೊತ್ತ್‌ಲೆ.

ಹಿಂಗಿರ್‌ಕಾಕನ ಅಪ್ಪ ಅವ್ವಂಗೆ ವಯಸಾತ್ ಕೆಲ್ಸ ಮಾಡಿಕೆ ಕಷ್ಟ ಆತಿತ್ತ್. ಮಕ್ಕ ಹೇಳ್ದೊ ತೋಟ ತೊಡಿಗೆನ ನಾವೇ ನೋಡಿಕಂಡವೆ, ನೀವು ವಿಶ್ರಾಂತಿ ಪಡೆನಿತ. ವಿದ್ಯೆ ಕಲ್ತ ಮಕ್ಕ ಕೆಲ್ಸ ಮಾಡದೆ ಎಲ್ಲಾ ಕೆಲ್ಸನೂ ಕೆಲಸದವರ ಹತ್ರಂದ ಮಾಡ್ಸ್‌ತಿದ್ದೊ. ಇವರ ಎಲ್ಲಾ ಸಂಬಳಕ್ಕೆ ಅಪ್ಪ ಕೂಡ್ಸಿಟ್ಟ ಹಣನೇ ಕೊಟ್ಟೊ. ಹಣನ ಖಾಳಿ ಮಾಡ್ದೊ. ಕೆಲ್ಸ ಮಾಡ್ತಿದ್ದ ಕೆಲ್ಸದವ್ಕೆ ಕೊಡಿಕೆ ಹಣ ಇಲ್ಲದಾತ್. ಇದರ್‌ನ ನೋಡ್ದ ಕೆಲ್ಸದವು ಇವರ ತೋಟ ಬುಟ್ಟ್ ಬೇರೆ ತೋಟಕ್ಕೆ ಹೊರ್ಟ್ ಹೋದೊ. ಇತ್ತ ಕೆಲ್ಸದವು ಇಲ್ಲದೆ ಕೆಲ್ಸಕ್ಕೆ ಜನ ಇಲ್ಲದೆ ತುಂಬಾ ಚಿಂತೆ ಹಿಡ್ತ್. ಬದ್ಕ್ ಒಂದ್ ಕಡೆಂದ ಹಾಳಾಗ್ತ ಬಾತ್. ಹೆಂಗಾರ್ ಮಾಡಿ ತಾವೇ ಸ್ವತಃ ದುಡಿಯಕೆ ಸುರು ಮಾಡ್ದೊ.

ಮಕ್ಕಳ ಕೆಲ್ಸ ನೋಡಿ ವಯಸ್ಸಾದ ಅಪ್ಪ ಅವ್ವನು ಅವರೊಟ್ಟಿಗೆ ಪುನಃ ದುಡ್ದ್ ಮಕ್ಕಳಿಗೆ ಕೆಲ್ಸ ಕಲ್ಸಿದೊ. ಇದರ್‌ನ ನೋಡ್‌ದ ಮಕ್ಕಳು ಹಗಲ್ ರಾತ್ರಿ ತೇಳದೆ ದುಡಿಯಕೆ ಸುರು ಮಾಡ್ದೊ. ಆದರೆ ಹಿಂಗೆ ದುಡ್ದ್ ಅಪ್ಪ ಅವ್ವ ಕೂಡ್ಸಿದ ಹಣನ ಗಳ್ಸಿಕೆ ಮಕ್ಕಳಿಗೆ 7 ವರ್ಷ ಬೇಕಾತ್.

ಅಷ್ಟರ್ಲಿ ಮಕ್ಕಳ್ ಲಗ್ನದ ವಯಸ್ಸಿಗೆ ಬಂದೊ. ಮಕ್ಕಳಿಗೆ ಮದುವೆ ಮಾಡಿ ತೀರ್ಸಿದೊ. ಈಗ ಇವ್ಕೆ ದುಡಿಯಕೆ ಎರಡ್ ಹೆಣ್ಣ್ ಮಕ್ಕಳು ಜಾಸ್ತಿ ಆದೊ. ನಾವು ಹೆಂಗಾರ್ ಮಾಡಿ ಕಷ್ಟ ಪಟ್ಟ್ ಬೆವರ್ ಸುರ್ಸಿ ಕಳ್ದ್ ಹೋದ ತೋಟನು ಹಣನೂ ಪಡ್ಕಂಡೊ. ಇತ್ತ ಆಳ್‌ಗಳ ಕೈಲಿ ಮಾಡ್ಸಿ ಸರಿಯಾದ ಫಸ್‌ಲ್ ಸಿಕ್ಕದಿದ್ದರೆ ನಾವ್ಗೆ ನಷ್ಟ ತಪ್ಪಿದಲ್ಲಂತ ಕಲ್ತ್‌ಕಂಡೊ. ಆಳ್‌ಗೊಳೊಟ್ಟಿಗೆ ಅಹಂಕಾರ ಬುಟ್ಟ್ ಉಪಾಯಲಿ ಕೆಲ್ಸ ಮಾಡಿರೆ ಸರಿಯಾದ ಪ್ರತಿ ಫಲ ಸಿಕ್ಕಿದೆಂತ ಗೊತ್ತಾತ್. ಆಳ್‌ಗಳಿಗೆ ಜಯಮಾನನ ವರ್ತನೆ ಸರಿ ಇಲ್ಲೆತ ಗೊತ್ತಾದರೆ ಈ ತೋಟ ಬುಟ್ಟ್ ಹೋದವೆಂತ ಗೊತ್ತಾತ್. ಆದರ್‌ಂದ ನಾವು ಸ್ವತಃ ದುಡ್ದ್ ಸಂಪಾದನೆ ಮಾಡ್ದ ಸಂಪತ್‌ನ ಪ್ರಭಾವ ಜಾಸ್ತಿ ಆತ್. ಹಿಂಗೆ ನಾವು ಒಂದ್ ನೇರ ಪಾಠನೇ ಕಲ್ತಂಗಾತ್. ಆ ನೀತಿ ಪಾಠನೇ ಇದ್.

ನಾನ್ ಮಾಡ್ದ್ ಉತ್ತಮ

ಮಂಞ ಮಾಡ್ದ್ ಮಧ್ಯಮ

ಆಳ್ ಮಾಡ್ದ್ ಹಾಳ್

ಈ ನೀತಿನ ಅನುಸರಿಸಿಕಂಡ್ ಎಲ್ಲವು ಸ್ವತಃ ದುಡ್ದ್ ದೇಶದ ಅಭಿವೃದ್ಧಿ ಒಟ್ಟಿಗೆ ಒಳ್ಳೆ ಪ್ರಜೆಂತೇಳುವ ಹೆಸ್ರ್‌ನ ಗಳ್ಸಿ.

## ಸುದ್ದಿ: ಉಳುವಾರನ ರೋಶನ್ ವಸಂತ

## ಮಡಿಕೇರಿಲಿ ನಡ್ದ ಗೌಡ ವಧೂವರರ ಸಮಾವೇಶ

ಕೊಡಗು ಗೌಡ ನಿವೃತ್ತ ನೌಕರರ ಸಂಘದ ಕಡೆಂದ ಕಳ್ದ ಫೆಬ್ರವರಿ ತಾರೀಖ್ 9ಕ್ಕೆ ಮಡಿಕೇರಿನ ಕೊಡಗು ಗೌಡ ವಿದ್ಯಾಸಂಘದ ಸಬಾಬಾಡೆಲಿ ಸಂಘದ ಅಧ್ಯಕ್ಷ ಕೋರನ ವಿಶ್ವನಾಥ್ ಅವರ ಅಧ್ಯಕ್ಷತೆಲಿ ವಧೂವರರ ಸಮಾವೇಶ ನಡ್ತ್. ಜಂಬರನ ಮಡಿಕೇರಿ ನಗರಸಭಾ ಅಧ್ಯಕ್ಷೆ ಕೂಡಕಂಡಿ ಕಾವೇರಮ್ಮ ಸೋಮಣ್ಣ ಅವು ಉದ್ಘಾಟನೆ ಮಾಡ್ದೊ. ಉದ್ಘಾಟನೆ ನೆರವೇರ್ಸಿ ಮಾತಾಡ್ದ ಅವು ಹಿಂದೆನ ಕಾಲಲಿ ಹಿರಿಯವು ಮನೆಮನೆಗೆ ಹೋಗಿ ನೆಂಟಸ್ಥಿಕೆನ ಮಾಡ್ತಿದ್ದೊ. ಆದರೆ ಇಂದ್‌ನ ದಿನಗಳ್ಲಿ ಹೊಟೇಲ್, ಲಾಡ್ಜ್‌ಗಳ್ಲಿ ಕುದ್ದ್ ಮಾತ್‌ಕತೆ ನಡ್ಸುವ ಕಾಲ ಬಂದುಟ್ಟು, ಅಂತರ ಜಾತಿ ಮದ್ವೆಗ ಹೆಚ್ಚಾಗ್ತಾ ಉಟ್ಟು. ಇದರ್‌ಂದ ಹೊಂದಾಣಿಕೆ ಕಾಣದೇ ದಾಂಪತ್ಯ ಜೀವನಲಿ ಕಷ್ಟನ ಅನುಭವಿಸುದು ಜಾಸ್ತಿಯಾಗ್ತ ಉಟ್ಟು. ಇದಕ್ಕೆಲ್ಲ ಅವಕಾಶ ಕೊಡದೇ ನಮ್ಮ ನಮ್ಮ ಜನಾಂಗದೊಳಗೆ ನೆಂಟಸ್ಥಿಕೆ ಮಾಡಿಕಂಡ್ ಮದುವೆ ಆಗಿ ನೆಮ್ಮದಿನ ಜೀವನನ ಬುಟ್ಟ್ ಹೋಕಾದ್‌ತ ಹೇಳ್ದೊ.

ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ ಅವು ಮಾತಾಡಿ ಹುಟ್ಟು ಆಕಸ್ಮಿಕ, ಸಾವು ಖಚಿತ ಇದರ ನಡುಲಿ ಬಾದು ನಮ್ಮ ಜೀವನದ ಸಂಗಾತಿನ ಹುಡ್ಕಿಕಣುವ ಮದುವೆ ಈ ಹೊತ್ತ್‌ಲಿ ತುಂಬಾ ಗ್ಯಾನ ಮಾಡಿ ತೀರ್ಮಾನ ತಕಣಕು. ಇಂದ್‌ನ ದಿನಗಳ್ಲಿ ವಿದ್ಯಾ, ಚಾಕರಿಗೆತ ಹೊರಗೆ ಹೋದವು ಸ್ವತಂತ್ರವಾಗಿ ಹುಡುಕಿಯಾಡುವ ಪರಿಸ್ಥಿತಿ ಉಟ್ಟು. ಅಂತರಜಾತಿ ಮದುವೆಂದ ನಮ್ಮ ಸಂಸ್ಕೃತಿನ ಮುಂದುವರ್ಸಿಕೆ ಕಷ್ಟ ಆದೆ. ಹಬ್ಬ–ಹರಿದಿನಗಳ್ಲಿ ಅವರ್‌ನ ಬೇರೆಯಾಗಿ ಕಾಣುವ ಪರಿಸ್ಥಿತಿ ಬಂದದೆ ಇದಕ್ಕೆ ಅವಕಾಶ ಮಾಡಿ ಕೊಡಕಾದ್. ಮಕ್ಕಳ ಬೆಳವಣಿಗೆಲಿ ಹೆತ್ತವು ಹನೀಯ ನಿಗಾ ಕೊಟ್ಟರೆ ಎಲ್ಲನೂ ಸರಿ ಆದೇತ ಹೇಳ್ದೊ.

ಮುಖ್ಯ ನೆಂಟರ್‌ಗಳಾಗಿ ಭಾಗವಹಿಸಿದ 'ಶಕ್ತಿ' ದಿನಪತ್ರಿಕೆಯ ಉಪಸಂಪಾದಕ, ಮಡಿಕೇರಿ ತಾಲೂಕು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಕುಡೆಕಲ್ ಸಂತೋಷ್ ಅವು ಮಾತಾಡಿ ಹಿಂದೆನ ಕಾಳಿ ಅವಿಭಕ್ತ ಕುಟುಂಬ ಪದ್ದತಿ ಇರ್‌ಕಾಕನ ಎಲ್ಲವೂ ಒಂದೇ ಕಡೆ ಒಂದೇ ಮನೆಲಿ ಇರ್ತಿದ್ದೊ, ಆಗ ಮನೆ ಮನೆಗೆ ಹೋಗಿ ನೆಂಟಸ್ಥಿಕೆ ಮಾಡಿಕಂಡ್ ಸಂಪ್ರದಾಯದಂಗೆ ಮದುವೆ ಆಗ್‌ತಿದ್ದೊ. ಇಂದ್‌ನ ಕಾಲಲಿ ಕಾಲಕ್ಕೆ ತಕ್ಕಂಗೆ ಕೋಲತ ಹೇಳುವಂಗೆ ಸಾಮಾಜಿಕ ಜಾಲ ತಾಣ ಬಂದ ಮೇಲೆ ಮುಖ ಪರ್‌ಚಯ ಇಲ್ಲದಿದ್ದರೂ ಪ್ರೀತಿ ಸುರು ಆಗಿ ಮದುವೆ ಆದವೆ. ಆ ಮದುವೆ ಮೂರೇ ದಿನಗಳ್ಲಿ ಮುರ್‌ದ್ ಬಿದ್ದದೆ. ಇದ್ ತುಂಬಾ ಬೇಜಾರ್‌ನ ಸಂಗತಿತ ಹೇಳ್ದೊ.

ನಿವೃತ್ತ ನೌಕರರ ಸಂಘದ ಅಧ್ಯಕ್ಷ ಕೋರನ ವಿಶ್ವನಾಥ್ ಮಾತನಾಡಿ ಮದುವೆ ಭಾಗ್ಯನ ಕಂಡ್‌ಕಂಡವು ಸಂಘಕ್ಕೆ ಮಾಹಿತಿ ಕೊಡೊಕು. ಗಂಡ್ ಹೆಣ್ಣ್ ನೋಡವ್ಕೆ ಈ ಸಂಘ ಒಂದು ಮಾಧ್ಯಮದಂಗೆ ಕೆಲ್ಸನ ಮಾಡ್ತುಟ್ಟು ಮುಂದೆನ ಹೆಜ್ಜೆ ಅವ್ಕವ್ಕೆ ಬುಟ್ಟದ್‌ತ ಹೇಳ್ದೊ.

ಜಂಬರಲಿ ಸಂಘದ ಉಪಾಧ್ಯಕ್ಷ ಕುದುಪಜೆ ಬೋಜಪ್ಪ, ಕಾರ್ಯದರ್ಶಿ ಬೈತಡ್ಕ ಬೆಳ್ಯಪ್ಪ, ಜಂಟಿ ಕಾರ್ಯದರ್ಶಿ ಕುದುಪಜೆ ಶಾರದ, ಖಜಾಂಜಿ ಪೊನ್ನಚನ ಸೋಮಣ್ಣ, ನಿರ್ದೇಶಕರುಗಳಾದ ದಂಬೆಕೋಡಿ ಆನಂದ, ಕುಯ್ಯಮುಡಿ ವಸಂತ, ಪಟ್ಟಡ ದೇವಯ್ಯ, ಚೆರಿಯಮನೆ ಪ್ರಮೋದ್, ಹೊಸೊಕ್ಲು ಪೊನ್ನಪ್ಪ, ತಳೂರು ಕಾಳಪ್ಪ, ಸಾಹಿತಿಗಳಾದ ಪಟ್ಟಡ ಪ್ರಭಾಕರ್, ಪುತ್ತೂರು ಅನಂತರಾಜ ಗೌಡ, ಉಪನ್ಯಾಸಕರಾದ ಪಟ್ಟಡ ಶಿವಕುಮಾರ್ ಸೇರ್ದಂಗೆ ಮುಖ್ಯಪಟ್ಟವು ಜನಾಂಗ ಬಾಂಧವು ಭಾಗವಹಿಸಿದ್ದೊ.

## ಆಲೂರು ಸಿದ್ದಾಪುರಲಿ ನಡ್ದ ಅರೆಭಾಷೆ ಗೌಡ ಸಂಘದ ಉದ್ಘಾಟನಾ ಜಂಬರ

ಕಳ್ದ ಫೆಬ್ರವರಿ ತಾರೀಖ್ 17ಕೆ ಸಂಗಯ್ಯನಪುರಲಿ ಹೊಸದಾಗಿ ಕಟ್ಟಿರುವ ಆಲೂರು ಸಿದ್ದಾಪುರ ಅರೆಬಾಸೆ ಗೌಡ ಸಮಾಜದ ಉದ್ಘಾಟನ ಜಂಬರ ನಡ್ತ್. ವಿರಾಜಪೇಟೆ ಕ್ಷೇತ್ರದ ಶಾಸಕ ಕೊಂಬಾರನ ಜಿ. ಬೋಪಯ್ಯ ಅವು ಹೊಸ ಸಮಾಜದ ಉದ್ಘಾಟನೆ ಮಾಡ್ದೊ ಮತ್ತೆ ಅವು ಮಾತಾಡಿ ಅರೆಭಾಸೆ ಗೌಡ ಜನಾಂಗದ ಸಂಸ್ಕೃತಿ, ಆಚಾರ, ವಿಚಾರ ಸಮಾಜಲಿರುವ ಎಲ್ಲಾ ಸಮುದಾಯಕೂ ಮಾದರಿ ಆಕು. ಪಂಡ್ ಕಾಲಂದ ಹಿರಿಯವು ನಡ್ಸಿಕಂಡ್ ಬಂದ ಸಂಪ್ರದಾಯ ಸಂಸ್ಕಾರನ ಅರ್ಥಮಾಡಿಕಂಡ್ ಮುಂದೆನ ಪೀಳಿಗೆಗೂ ಉಳ್ಸಿ ಬೆಳ್ಸಕುತ ಹೇಳ್ದೊ.

ಕರ್ನಾಟಕ ಅರೆಬಾಸೆ ಅಕಾಡೆಮಿನ ಅಧ್ಯಕ್ಷ ಪಾಲ್ತಾಡ್ ಸಿ. ಜಯರಾಮ್ ಅವು ಮಾತಾಡಿ ಗೌಡ ಜನಾಂಗದವು ಮೂಲ ನಿವಾಸಿಗ, ನಮ್ಮ ಜನಾಂಗಕ್ಕೆ ಸುಮಾರ್ ವರ್ಷಗಳ ಇತಿಹಾಸ ಉಟ್ಟು. ವಿಶೇಷ ಸಂಸ್ಕೃತಿ ಆಚಾರ, ವಿಚಾರಗ ಒಳೊ. ಮುಂದೆನ ದಿನಗಳ್ಲಿ ಅರೆಬಾಸೆ ಸಾಹಿತ್ಯ ಸಮ್ಮಿಲನ ನಡ್ಸಿಕೆ ಅಕಾಡೆಮಿ ತೀರ್ಮಾನ ಮಾಡುಟುತ ಹೇಳ್ದೊ.

ಕುಶಾಲನಗರ ಪೊಲೀಸ್ ವರಿಷ್ಠಾಧಿಕಾರಿ ಪೆರುಬಾಯಿ ಮುರುಳೀಧರ್ ಅವು ಮಾತಾಡಿ ನಮ್ಮ ಜನಾಂಗಲಿ ಗುರ್ತಿಸಿಕಣುವಂತ ಐ.ಎ.ಎಸ್, ಐ.ಪಿ.ಎಸ್, ಕೆ.ಎ.ಎಸ್ ಹಿಂಗೆ ದೊಡ್ಡ ದೊಡ್ಡ ಚಾಕರಿಗಳ್‌ನ ತಕಂಡ್ ಹೊರಗೆ ಬಾಕುತ ಹೇಳ್ದೊ.

ಜಂಬರಲಿ ಆಲೂರು ಸಿದ್ದಾಪುರದ ಹಿರಿಯರಾದ ಕೋಳಿಬೈಲು ಬೋಜಪ್ಪ, ಬೈಮನ ರಾಘವಯ್ಯ, ಕೆದಂಬಾಡಿ ಈರಪ್ಪ, ಗೌಡ ಸಮಾಜದ ಅಧ್ಯಕ್ಷ ದೇವಾಯಿರ ಜಿ.ಗಿರೀಶ್, ಕೊಡಗು ಗೌಡ ಯುವ ವೇದಿಕೆ ಅಧ್ಯಕ್ಷ ಪೈಕೇರ ಮನೋಹರ್ ಮಾದಪ್ಪ ಸೇರ್ದಂಗೆ ಜನಾಂಗ ಭಾಂದವು ಭಾಗವಹಿಸಿದ್ದೊ.

ಜಂಬರದ ಪ್ರಯುಕ್ತ ಹೊತ್ತಾರೆ ಸಂಗಯನಪುರ ಗ್ರಾಮದ ಚಾಮುಂಡೇಶ್ವರಿ ದೇಸ್ಥಾನಲಿ ಪೂಜೆ ಮಾಡಿ ಜನಾಂಗದ ಹೆಣ್ಣ್‌ಜನ ಹಂಗೆ ಗಂಡ್‌ಜನ ಸಾಂಪ್ರದಾಯಿಕ ಉಡುಗೆಲಿ ಪೂರ್ಣಕುಂಭ ಮೆರವಣಿಗೆಲಿ ವೇದಿಕೆಗೆ ನೆಂಟ್ರ್‌ಗಳ್‌ನ ಕರ್ಕಂಡ್ ಬಂದೊ. ಇದೇ ಹೊತ್ತ್‌ಲಿ ನೆಲ್ಲಕ್ಕಿ ತಂಡದವರ್‌ಂದ ಸಾಂಸ್ಕೃತಿಕ ಕಾರ್ಯಕ್ರಮ ಬಾಳ ಲಾಯ್ಕಲಿ ನಡ್ತ್.

---

## ಹಳಬರ ಜೋಳಿಗೆ

**ಹಳಬರ ಜೋಳಿಗೆ ಸಂಚಿಕೆ–9** ಕ್ಕೆ ಲೇಖನಗಳ್ನ ಆಹ್ವಾನಿಸಿಯೊಳೊ. ನಿಮ್ಮಲ್ಲಿ ಇಂತಹ ಕತೆಗ, ಇಲ್ಲರೆ ತಾತ ಅವ್ವ ಹೇಳ್ದ ಅವರ ನೆನ್ಪುನ ಕತೆಗ, ನಿಮ್ಮ ಅನುಭವ ಕತನಗ ಇದ್ದರೆ ಈ ವಿಳಾಸಕ್ಕೆ ಕಳ್ಸಿ ಕೊಡಿ

**ಜಯಮ್ಮ ಚೆಟ್ಟಿಮಾಡ**
**ಸಂಪಾದಕಿ ಮತ್ತು ಪ್ರಕಾಶಕಿ**
**ಕಾವ್ಯ ಕಾವೇರಿ**
**ಮೊಗರ್ಪಣೆ ಮನೆ**
**ಸುಳ್ಯ. ದ.ಕ**

# ಮಡಿಕೇರಿಲಿ ನಡ್ದ ಅರೆಬಾಸೆ ಕವನ-ಕುಂಚ ಕಾರ್ಯಕ್ರಮ

ಮಾರ್ಚ್ ತಾರೀಖ್ 3ಕ್ಕೆ ಮಡಿಕೇರಿನ ಕೊಡಗು ಗೌಡ ವಿಧ್ಯಾ ಸಂಘದ ಸಬಾಬಾಡೆಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಕಡೆಂದ ಅಕಾಡೆಮಿನ ಅಧ್ಯಕ್ಷ ಪಾಲ್ತಾಡ್ ಸಿ. ಜಯರಾಮ್ ಅವರ ಅಧ್ಯಕ್ಷತೆಲಿ ಕವನ-ಕುಂಚ ಕಾರ್ಯಕ್ರಮ ಬಾಳ ಲಾಯ್ಕಲಿ ನಡ್ತ್.

ಜಂಬರನ ಮಡಿಕೇರಿ ಕ್ಷೇತ್ರದ ಶಾಸಕ ಮಂಡೇಪಂಡ ಅಪ್ಪಚ್ಚುರಂಜನ್ ಅವು ಉದ್ಘಾಟನೆ ಮಾಡ್ದೊ. ಮತ್ತೆ ಅವು ಮಾತಾಡಿ ಅರೆಭಾಸೆ ಸಂಸ್ಕೃತಿ, ಆಚಾರ, ವಿಚಾರ ಇಡೀ ಲೋಕಕ್ಕೆ ಹಬ್ಬೊಕು. ಅಕಾಡೆಮಿನ ಕೆಲ್ಸಗ ತುಂಬಾ ಲಾಯ್ಕಲಿ ನಡಿತಾ ಉಟ್ಟು ಈ ಕಾರ್ಯಕ್ರಮ ರಾಜ್ಯ ಮತ್ತೆ ರಾಷ್ಟ್ರಲೆಲ್ಲ ಜನರ ಮನಸೂರೆಗೊಳ್ಳಲಿ ತ ಹಾರೈಸಿದೊ.

ವಿಧಾನ ಪರಿಷತ್ ಸದಸ್ಯೆ ಶಾಂತೆಯಂಡ ವೀಣಾ ಅಚ್ಚಯ್ಯ ಅವು ಅಕಾಡೆಮಿನ ಮೂರು ವರ್ಷಗಳ ಕಾರ್ಯಚಟುವಟಿಕೆಗಳ ಕುರ್ತ 'ಸಫಲ' ಪುಸ್ತಕನ ಬುಡುಗಡೆ ಮಾಡ್ದೊ. ಅವು ಮಾತಾಡಿ ಅರೆಭಾಸೆ ಸಂಸ್ಕೃತಿ,




ಆಚಾರ, ವಿಚಾರಗಳ ಕುರ್ತ್ ಮಾಹಿತಿ ಕೊಡಿಕೆ ಅಕಾಡೆಮಿ ಮುಂದೆ ಬಂದುಟು. ಇಂತಹ ಕೆಲ್ಸಗ ಇನ್ನು ನಡಿಯೊಕು. ಸರಕಾರ ಅಕಾಡೆಮಿಗಳಿಗೆ ಹಿಚ್ಚಿನ ಅನುದಾನ ಕೊಡ್ತಾ ಉಟ್ಟು, ಇದನ್ನ ಸರಿಯಾಗಿ ಬಳ್ಸಿಕಣಕು. ಯುವ ಜನಾಂಗ ಅವ್ವ ಭಾಸೆನ ಪ್ರೀತಿಸೊಕು, ಉಳ್ಸಿ ಬೆಳ್ಸೊಕು. ಇಂದ್‌ನ ಮಕ್ಕ ಅವ್ವ ಭಾಸೆನ ಮಾತಾಡಿಕೆ ಹಿಂದೆ ಮುಂದೆ ನೋಡುವ ಪರಿಸ್ಥಿತಿ ಬಂದುಟು. ಇದ್ ಒಳ್ಳೆ ಬೆಳವಣಿಗೆ ಅಲ್ಲ. ಸಂಪ್ರದಾಯ ಮರ್‌ತರೆ ಮೂಲ ಸಂಸ್ಕೃತಿನ ಮರ್‌ತಂಗೆ ಆದೇತ ಹೇಳ್ದೊ.

ನಗರಸಭೆನ ಅಧ್ಯಕ್ಷೆ ಕೂಡಕಂಡಿ ಕಾವೇರಮ್ಮ ಸೋಮಣ್ಣ ಅವು ಮಾತಾಡಿ ಅರೆಭಾಸೆನ ಬೆಳ್ಸಿಕೆ ಎಲ್ಲವೂ ಮುಂದೆ ಬಾಕು ಹೆತ್ತವು ಮಕ್ಕಳಿಗೆ ನಮ್ಮ ಭಾಸೆನ ಕಲ್ಸೊಕು. ನಮ್ಮ ಆಚಾರ ವಿಚಾರ, ಪದ್ಧತಿ, ಸಂಪ್ರದಾಯನ ಮಕ್ಕಳಿಗೆ ಲಾಯ್ಕಲಿ ಹೇಳಿಕೊಡಕು ತ ಹೇಳ್ದೊ.

ಅಕಾಡೆಮಿ ಅಧ್ಯಕ್ಷ ಪಾಲ್ತಾಡ್ ಸಿ. ಜಯರಾಮ್ ಅವು ಮಾತಾಡಿ ಅಕಾಡೆಮಿನ ಕಡೇಂದ ಅರೆಭಾಸೆ ಪದಕೋಶನ ಹೊರಗೆ ತಾಕೆ ಗ್ಯಾನ ಮಾಡಿಯೊಳೊ. ಪಾಠ ಪುಸ್ತಕಲೂ ಸೇರ್ಸಿಕೆ ಚರ್ಚೆ ನಡೀತಾ ಉಟ್ಟು. ಯಕ್ಷಗಾನ ತಂಡನ ಸುರು ಮಾಡಿ ತರಭೇತಿ ಕೊಟ್ಟವೆ. ಹಂಗೆ ಮಂಗಳೂರು ವಿಶ್ವವಿದ್ಯಾಲಯಲಿ ಅರೆಭಾಷೆ ವಿದ್ಯಾಪೀಠನ ಸುರುಮಾಡಿಕೆ ಮಾತ್‌ಕತೆ ನಡ್ದುಟು. ಅರೆಭಾಷೆಗಾಗಿ ಇನ್ನು ತುಂಬಾ ಯೋಜನೆಗ ಒಳೋತ ಹೇಳ್ದೊ.

ಡಾಕ್ಟರ್ ವಿಶ್ವನಾಥ್ ಬದಿಕಾನ ಅವು ಮಾತಾಡಿ ಅಕಾಡೆಮಿಲಿ ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯತ ಹೇಳುವ ನಾಲ್ಕು ವಿಚಾರಗ ಸೇರುಟ್ಟು ಇದೊಂದು ರಾಜ್ಯಲೇ ವಿಶೇಷ ಅಕಾಡೆಮಿಯಾಗುಟ್ಟು. ಇದೊಂದು ವಿಷಯಲಿ ಎಲ್ಲವೂ ಹೆಮ್ಮೆ ಪಡಕುತ ಹೇಳ್ದೊ.

ಕವಿಗೋಷ್ಠಿಲಿ ಡಾಕ್ಟರ್ ಕರುಣಾಕರ ನಿಡಿಂಜಿ ಅವು ತಮ್ಮ 'ಸಾಂತನ ಪಂಚೆ' ಕನವಲಿ ಒಬ್ಬ ರೈತ ಕೋಣನೊಟ್ಟಿಗೆ ಸಂತೆಗೆ ಹೋಕನ ಕಳ್ಳನ ಗ್ಯಾನಲಿ ಆದ ಪಾಡ್‌ನ ತಮಾಷೆಲಿ ಹೇಳ್ದೊ. ಶಿವದೇವಿ ಅವನಿಶ್ಚಂದ್ರ ಅವು ತಮ್ಮ ಕವನಲಿ ಬಾಲ್ಯಲಿ ಅಪ್ಪನೊಟ್ಟಿಗೆ ಕೃಷಿಲಿ ಸೇರಿಕಂಡ್ ಗೆಳೆಯರೊಟ್ಟಿಗೆ ಆಟ ಹೊಡ್ದಾಟದೊಟ್ಟಿಗೆ ಬಾಲ್ಯದ ಗ್ಯಾನನ ವರ್ಣಿಸಿದೊ. ಕುಲ್ಲಚನ ಕಾರ್ಯಪ್ಪ ಅವು ತಮ್ಮ ಕವನಲಿ 'ಚಾಂಪನ ಭಜನೆ'ನ ತಮಾಷೆಲಿ ಹೇಳ್ದೊ. ಎಸ್.ಕೆ ಈಶ್ವರಿ ಅವು ವಯಸ್ಸಾದ ಕಾಲಲಿ ನಮ್ಮನ ಸಾಂಕಿ ಸಲಹಿದವರ್‌ನ ವೃದ್ಧಾಶ್ರಮಕ್ಕೆ ಕಳ್ಸುವ ವಾಸ್ತವ ಚಿತ್ರನ ಅರ್ಥಪೂರ್ಣವಾಗಿ ಹೇಳ್ದೊ. ತೆಕ್ಕಡೆ ಕುಮಾರಸ್ವಾಮಿ ಅವು 'ಸೃಷ್ಠಿಲಿ ವ್ಯತ್ಯಾಸಗ' ಕವನಲಿ ಭಗವಂತ ಉಟ್ಟ? ನೆನೆಯೊಕ ಬೇಡನನ ಹೇಳ್ದೊ. ಸೆಟ್ಟೆಜನ ಗೀತಾ ಪದ್ಮನಾಭ ಅವು 'ಕೊಡಗ್ ನಮ್ಮದ್' ಕವನಲಿ ಕೊಡಗ್‌ನ ಸಿರಿ ವೈಭವ, ಗೌಡರ ವೀರ ಪರಂಪರೆ, ಸಂಪ್ರದಾಯ ಉಡುಗೆ–ತೊಡುಗೆನ ಕುರ್ತ್ ಹೇಳ್ದೊ. ಬಾರಿಕೆ ಶೈಲಜಾ ಅವು 'ಕಿಡಿಯಾಗಿ ನಾ' ಕವನಲಿ ಹೆಣ್ಣ್‌ನ ಮನ್ಸ್‌ನ ಮಾತ್‌ನ ವಿವರಿಸಿದೊ. ಮಾಧವ ಚೆಂಬು ಅವು 'ದೊಡ್ಡತ್ತೆ ಮಗಳ್ ಮೀನಾ' ಕವನಲಿ ಮನೆಗೆ ಬಂದ ಅತ್ತೆ ಮಗಳ ಮೇಲೆನ ಪ್ರೀತಿನ ನಡು ನಡುಲಿ ಮಿಮಿಕ್ರಿನೊಟ್ಟಿಗೆ ಹೇಳ್ದೊ.

ಒಂದು ಕಡೇ ಕವನಗಳ್‌ನ ಓದಿರೆ ಇನ್ನೊಂದು ಕಡೆ ಕಲಾವಿದರಾದ ಕೋಡಿ ಭರತ್ ಮತ್ತೆ ಮೂಡಗದ್ದೆ ಕೌಶಿಕ್ ಅವು ಖಾಲಿ ಹಾಳೆಲಿ ಕವನಗಳ ಅರ್ಥಕ್ಕೆ ತಕ್ಕಂಗೆ ತಮ್ಮದೇ ಶೈಲಿಲಿ ಚಿತ್ರ ಬುಡ್ಸಿದೊ.

ಕಡೆಗೆ ತಿತಿಮತಿನ ಭರಣಿ ಕಲಾ ತಂಡದ ಕಲಾವಿದರ್‌ಂದ ಹುತ್ತರಿ ಕೋಲಾಟ ಹಂಗೆ ಮಡಿಕೇರಿನ ಲಿಟಲ್ ಫ್ಲವರ್ ಶಾಲೆನ ಮಕ್ಕಳ್‌ಂದ ಸಾಂಸ್ಕೃತಿಕ ಕಾರ್ಯಕ್ರಮ ನಡ್ತ್.

ಜಂಬರಲಿ ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ, ಅಕಾಡೆಮಿನ ಮಾಜಿ ಅಧ್ಯಕ್ಷ ಕೊಲ್ಯದ ಗಿರೀಶ್, ಕೊಡಗು ಗೌಡ ಸಮಾಜದ ಅಧ್ಯಕ್ಷ ಪೇರಿಯನ ಜಯಾನಂದ, ಮಡಿಕೇರಿ ತಾಲೂಕು ಪಂಚಾಯ್ತಿ ಅಧ್ಯಕ್ಷೆ ತೆಕ್ಕಡೆ ಶೋಭಾ ಮೋಹನ್, ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆ ಕುಂಜಿಲನ ಮುತ್ತಮ್ಮ ಸೇರ್ದಂಗೆ ಅಕಾಡೆಮಿ ಸದಸ್ಯರ್, ಜನಾಂಗ ಭಾಂದವ್ ಹಾಜರಿದ್ದೊ.

# ಊರುಬೈಲು ತಂಡಕ್ಕೆ ಪೆರಾಜೆ ಕ್ರಿಕೆಟ್ ಕಪ್

ಗೌಡರ ಯುವ ಸೇವಾ ಸಂಘ ಸುಳ್ಯ ಮತ್ತೆ ಗೌಡ ಗ್ರಾಮ ಸಮಿತಿ ಪೆರಾಜೆ ಹಂಗೆ ನಿಡ್ಯಮಲೆ ಕುಟುಂಬಸ್ಥರ ಕೂಡುಕೂಟುಲಿ ಕಳ್ದ ಫೆಬ್ರವರಿ ತಾರೀಖ್ 25 ರ್‌ಂದ ಮಾರ್ಚ್ 7ರ ಮುಟ್ಟ ಪೆರಾಜೆನ ಶ್ರೀ ಶಾಸ್ತಾವು ದೇಸ್ಥಾನದ ಇದುರು ಇರುವ ಕಾವೇರಿ ಗದ್ದೆ ಆಟದ ಬಾಣೆಲಿ ನಿಡ್ಯಮಲೆ ಕಪ್ ಕ್ರಿಕೆಟ್ ಹಬ್ಬ ಬಾಳ ಲಾಯ್ಕಲಿ ನಡ್ತ್. ಈ ವರ್ಷ 84 ತಂಡಗ ಈ ಪಂದ್ಯಾಟಲಿ ಭಾಗವಹಿಸಿದ್ದೊ.

ಫೆಬ್ರವರಿ 25ಕ್ಕೆ ಸುರು ಆದ ನಿಡ್ಯಮಲೆ ಕಪ್ ಕ್ರಿಕೆಟ್ ಹಬ್ಬ ಒಟ್ಟು 11 ದಿನ ಬಾಳ ಲಾಯ್ಕಲಿ ನಡ್ತ್. 84 ಕುಟುಂಬ ತಂಡಗಳ್ಲಿ ಊರುಬೈಲ್ ಮತ್ತೆ ಉಳುವಾರು ತಂಡಗ ಅಂತಿಮ ಆಟಕ್ಕೆ ತಲ್ಪಿದೊ. ಅಂತಿಮ ಆಟಲಿ ಊರುಬೈಲ್ ತಂಡ 8 ಓವರ್‌ಗಳ್ಲಿ 3 ವಿಕೆಟ್‌ಗೆ 87 ರನ್ ಗಳ್ಸಿತ್ ಇದನ್ನ ಬೆನ್ನತ್ತಿದ ಉಳುವಾರು ತಂಡ 6 ವಿಕೆಟ್ ಕಳ್ಕಂಡ್ 66 ರನ್ ಗಳ್ಸಿ 21 ರನ್‌ಗಳ ಅಂತರಲಿ ಸೋಲೊಪ್ಪಿಕಣ್ತ್. ಎರಡನೇ ಬಾರಿಗೆ ಊರುಬೈಲ್ ತಂಡ ಪೆರಾಜೆಲಿ ಗೆಲುವಿನ ತಂಡ ಆಗಿ ಹೊರಹೊಮ್ಮಿತ್. ಹಂಗೆನೆ ಉತ್ತಮ ಡಾಂಡಿಗ ಪ್ರಶಸ್ತಿನ ಕುಡೆಕಲ್ಲು ಕಾರ್ತಿಕ್,



ಉತ್ತಮ ಧಾಳಿಕಾರ ಇನಾಮುನ ಊರುಬೈಲು ಲೋಕೇಶ್ ಉತ್ತಮ ಆಲ್‌ರೌಂಡರ್ ಉನಾಮುನ ಉಳುವಾರನ ಮೋಕ್ಷಿತ್‌ನವು ಪಡ್ಕಂಡೊ.

ಹಂಗೆ ಹೆಣ್ಣ್‌ಮಕ್ಕಳಿಗೆ ಹಗ್ಗ ಎಳಿವ ಪೈಪೋಟಿಲಿ ಉಳುವಾರು ತಂಡ ಸುರುನ ಇನಾಮು ಪಡ್ಕಂಡ್ರೆ ಬಳ್ಪಡ್ಕ ತಂಡ ಎರಡನೇ ಇನಾಮುನ ಪಡ್ಕಂತ್.

ನಿಡ್ಯಮಲೆ ಕ್ರಿಕೆಟ್ ಹಬ್ಬದ ಆಕಿರಿ ಜಂಬರ ಮಾರ್ಚ್ ತಾರೀಖ್ 7ಕ್ಕೆ ಮದ್ಯಾಹ್ನ 2 ಗಂಟೆಗೆ ಕುಂಬಳಚೇರಿ ಪದ್ಮಯ್ಯ ಅವರ ಅಧ್ಯಕ್ಷತೆಲಿ ನಡ್ತ್. ಮುಖ್ಯ ನೆಂಟ್ರ್‌ಗಳಾಗಿ ಭಾಗವಹಿಸಿದ ವಿರಾಜಪೇಟೆ ಕ್ಷೇತ್ರದ ಶಾಸಕ ಕೊಂಬಾರನ ಜಿ. ಬೋಪಯ್ಯ ನವು ಮಾತನಾಡಿ ಕುಟುಂಬವಾರು ಕ್ರಿಕೆಟ್ ಆಟಗ ಜನಾಂಗದ ನಡುಲು ಒಗ್ಗಟ್ಟು ಪ್ರೀತಿ, ವಿಶ್ವಾಸ ಬೆಳ್ಸಿಕೆ ಒಳ್ಳೆ ವೇದಿಕೆ. ಸೋಲು ಗೆಲುವಿನ ಹೆಜ್ಜೆ ತ ಹೇಳುವೆ, ಆಟಲಿ ಭಾಗವಹಿಸುದು ಮುಖ್ಯ. ಆಟಂದ ಮನಸ್‌ಗೆ ನೆಮ್ಮದಿ, ತಡಿಗೆ ಒಳ್ಳೆ ಆರೋಗ್ಯ ಸಿಕ್ಕಿದೆ ಹಂಗೆ ನಿಡ್ಯಮಲೆ ಕುಟುಂಬಸ್ಥರ ಈ ಕ್ರಿಕೆಟ್ ಹಬ್ಬನ ಎಲ್ಲವೂ ಮೆಚ್ಚುವಂತದ್ದ್, ಇದ್ ಹಿಂಗೇ ಮುಂದುವರೆಲಿ ತ ಹಾರೈಸಿದೊ.

ಕರ್ನಾಟಕ ಅರೆಭಾಷೆ ಅಕಾಡೆಮಿನ ಸದಸ್ಯ ಬಾರಿಯಂಡ ಜೋಯಪ್ಪ ಅವು ಮಾತಾಡಿ ಆಟ ನೋಡವ್ಕೆ ಕುಸಿ ಹಂಗೆ ಆಡವ್ಕೆ ಒಳ್ಳ ಆರೋಗ್ಯ ಕೊಟ್ಟದೆ. ಒಂದಲ್ಲ ಒಂದು ಆಟಲಿ ತೊಡಗಿಸಿಕಂಡ್ರೆ ಒಳ್ಳ ಆರೋಗ್ಯ ಕಾಂಬಕೆ ಸಾಧ್ಯ ಉಟ್ಟು. ನಮ್ಮ ಜನಾಂಗದವು ಎಲ್ಲಾ ಕ್ಷೇತ್ರಲೂ ಮುಂದೆ ಬಾಕು ತ ಹೇಳ್ದೊ.

ಮಡಿಕೇರಿ ತಾಲೂಕು ಪಂಚಾಯ್ತಿ ಅಧ್ಯಕ್ಷ ಕುಂದಲ್ಪಾಡಿ ನಾಗೇಶ್ ಅವು ಮಾತಾಡಿ ನಿಡ್ಯಮಲೆ ಕ್ರಿಕೆಟ್ ಹಬ್ಬ ಪೆರಾಜೆನ ಹೆಮ್ಮೆಯ ವಿಷಯ. ಇದನ್ನ ಶಿಸ್ತ್‌ಲಿ ನಡ್ಸಿಯೊಳೊ, ನಿಡ್ಯಮಲೆ ಕುಟುಂಬದ ಹಿರಿಯವು ಸಾಧಕರ್, ಅವರ ಸಾಧನೆನ ಮಟ್ಟಕ್ಕೆ ಇಂದ್‌ನ ಮಕ್ಕ ಹೋಕು. ದಿನಂದ ದಿನಕ್ಕೆ ಪರಿಸರದ ತಾಪ ಏರ್ತಾ ಉಟ್ಟು. ಇದಕ್ಕೆ ಬೇರೆ ಯಾರೂ ಕಾರಣ ಅಲ್ಲ! ನಾವೇ... ಎಲ್ಲವ್ಕೂ ಪರಿಸರ ಪ್ರೇಮ ಇರಕು. ಎಲ್ಲವೂ ಗಿಡಗಳ್ನ ನೆಟ್ಟ್ ಬೆಳ್ಸಕು. ಪರಿಸರ ಲಾಯ್ಕ ಇದ್ದರೆ ಮಾತ್ರ ಆರೋಗ್ಯವಂತ ಜೀವನ ನಡ್ಸಿಕೆ ಸಾಧ್ಯತ ಹೇಳ್ದೊ.

ಕೊಡಗು ಗೌಡ ಸಮಾಜಗಳ ಒಕ್ಕೂಟದ ಅಧ್ಯಕ್ಷ ಸೂರ್ತಲೆ ಸೋಮಣ್ಣ ಅವು ಮಾತಾಡಿ ಆಟ ಮನ್ಸ್‌ನ ಆರೋಗ್ಯಕ್ಕೆ ತುಂಬಾ ಒಳ್ಳದ್. ಮಕ್ಕಳ್ಲಿ ಆಟದ ಬಗ್ಗೆ ಒಲವು ಮೂಡ್ಸಕು. ನಮ್ಮ ಜೀವನ ಒಂದೇ ಒಂದು ಕ್ಷೇತ್ರಕ್ಕೆ ಮೀಸಲ್ ಇದ್ದರೆ ಸಾಲದ್, ಎಲ್ಲಾ ಕ್ಷೇತ್ರಲೂ ಮುಂದೆ ಬಾಕು. ನಮ್ಮ ಜನಾಂಗದವು ಆದಷ್ಟ್ ಐ.ಎ.ಎಸ್ ನಂತಹ ದೊಡ್ಡ ದೊಡ್ಡ ಚಾಕರಿಗಳ್ನ ಪಡ್ಕಣಿಕೆ ಪ್ರಯತ್ನ ಪಡೊಕು ತ ಹೇಳ್ದೊ.

ಜಂಬರಲಿ ನಿಡ್ಯಮಲೆ ಕುಟುಂಬದ ಪಟ್ಟೆದಾರ ಬೋಜಪ್ಪ, ಸುಳ್ಯದ ಎ.ಓ.ಎಲ್.ಇ ನ ನಿರ್ದೇಶಕ ಕೆ.ಸಿ ಅಕ್ಷಯ್, ಸುಳ್ಯದ ರೋಟರಿ ಕ್ಲಬ್ ಅಧ್ಯಕ್ಷ ಎನ್.ಎ ಜಿತೇಂದ್ರ, ತರುಣ ಘಟಕದ ಅಧ್ಯಕ್ಷ ರಕ್ಷಿತ್ ಬಂಗಾರಕೋಡಿ, ತರುಣ ಘಟಕದ ಕಾರ್ಯದರ್ಶಿ ನಿಡ್ಯಮಲೆ ಮನೋಜ್, ಕ್ರೀಡಾ ಸಂಚಾಲಕ ಕುಂಬಳಚೇರಿ ಉದಯಚಂದ್ರ, ಕ್ರೀಡಾ ಸಹ ಸಂಚಾಲಕ ಬಂಗಾರಕೋಡಿ ಕಿರಣ್ ಸೇರ್ದಂಗೆ ಕುಟುಂಬ ಬಾಂಧವು, ಕ್ರೀಡಾಭಿಮಾನಿಗ ಉಪಸ್ಥಿತರಿದ್ದೊ.

ಇದೇ ಹೊತ್ತ್‌ಲಿ ಆಟದ ಬಾಣೆನ ಬುಟ್ಟು ಕೊಟ್ಟ ಮೂಲೆಮಜಲು ಸುಬ್ರಮಣ್ಯ, ಶಾಮಿಯಾನ ದಾನಿ ನಿಡ್ಯಮಲೆ ಚಿದಾನಂದ, ಧ್ವನಿವರ್ದಕ ದಾನಿ ಬಾಳೆಕಜೆ ಜಯರಾಮ, ನಿಡ್ಯಮಲೆ ಕುಟುಂಬದ ಪೂಜಾರಿ ಲೋಲಜಾಕ್ಷ, ನಿಡ್ಯಮಲೆ ರಾಧಾಕೃಷ್ಣ, ಐನ್ ಮನೆ ಪೂಜಾರಿ ನಿಡ್ಯಮಲೆ ಬಾಲಚಂದ್ರ, ಆಕಾಶವಾಣಿ ಉಘೋಷಕ ವಿನೋದ್ ಮೂಡಗದ್ದೆ, ಅರೆಬಾಷೆ ಸುದ್ದಿಜೊಂಪೆ ವಾಚಕ ಉಳುವಾರನ ರೋಶನ್ ಅವರ್ನ ಸನ್ಮಾನ ಮಾಡಿ ಗೌರವಿಸಿದೊ.

---

## ಮತ್ತೆ ಬಾತ್ ಆಟೋಟದ ಹಬ್ಬ

ಹಂ!!! ಬೇಸಿಗೆ ರಜೆ ಬಾತ್ ತೇಳ್ರೆ ಮಕ್ಕಳಿಗೆಲ್ಲ ತಾತ ಅವ್ವನ ಮನೆ ಕಡೆ ಓಡೋ ತವಕ. ಕಾಡು ಮೇಡು ಸುತ್ತುದು ಒಂದು ಕಡೆ ಆದರೆ, ಊರ್‌ಲಿ ನಡೆವ ಆಟೋಟಗ ಇನ್ನೊಂದು ಕಡೆ.

ಈಗಾಗಲೇ ಪೆರಾಜೆನ ಕಾವೇರಿ ಆಟದ ಬಾಣೆಲಿ ನಿಡ್ಯಮಲೆ ಕ್ರಿಕೆಟ್ ಹಬ್ಬ ಮುಗ್ದ್ ಊರುಬೈಲ್ ತಂಡ ವಿಜಯೀ ತಂಡ ಆಗಿಯುಟು. ಇನ್ನ್ ಮಾರ್ಚ್ 25 ರ್‌ಂದ ಕೆದಂಬಾಡಿ ಆಟದ ಬಾಣೆಲಿ 25ನೇ ವರ್ಷದ ಸಂಭ್ರಮಾಚರಣೆಯ ಕೆದಂಬಾಡಿ ಕ್ರಿಕೆಟ್ ಹಬ್ಬ ಸುರು ಆವು. ಅದ್ ಮುಗ್ದಂಗೆ ಮಡಿಕೇರಿನ ಮ್ಯಾನ್ಸ್ ಕಾಂಪೌಂಡ್ ಆಟದ ಬಾಣೆಲಿ ಯುವ ವೇದಿಕೆ ವತಿಂದ ಚೆರಿಯಮನೆ ಕ್ರಿಕೆಟ್ ಜಂಬರ ಏಪ್ರಿಲ್ 15ರ್‌ಂದ ಸುರು ಆದೆ. ಹಂಗೆನೆ ಇನ್ನಷ್ಟ್ ಆಟೋಟಗ ಕ್ರೀಡಾ ರಸಿಕರ ಮನ ತಣಿಸಿಕೆ ಕಾಯ್ತಾ ಉಟ್ಟು.

# ತಂತ್ರ

(ಟೆಕ್‌ನಿಕ್)

**–ಹೊಳೆಕೆರೆ ಚೆಂಗಪ್ಪ**



ಬೇಟೆಕಾಡ್ ತೋಡ್ ದಾಟಿರೆ ಸಿಕ್ಕುದು ಅಡಿಕೆ ತೋಟ. ನಾವ್ ಸಣ್ಣದರ್ಲಿ ಇರ್ಕನ ಅಲ್ಲಿಗೆ ಹೋದು ತುಂಬಾ ಕುಶಿ. ಅಡಿಕೆ ಮರಂದ ಬಿದ್ದ ಹಾಳೆಗಳ್‌ನ ತಂದ್ ಆಟ ಆಡ್‌ದುತೇಳಿರೆ – ಬೇಟೆಕಾಡ್ ತೋಡ್‌ಲಿ ಪೊರ್ಕ ಮೀನ್ ಹಿಡಿಯದುಕ್ಕಿಂತ ಮಜಾ! ಈ ಆಟಕ್ಕೆ ಇಬ್ಬರು ಬೇಕ್. ಒಬ್ಬ ಕುದ್‌ಕಣಿಕ್ಕೆ ಇನ್ನೊಬ್ಬ ಎಳ್‌ಕಂಡ್ ಹೋಕೆ. ಆಟ ಅಡ್ತಾ ಆಡ್ತಾ ಹಾಳೆ ಸಮೇತ ಚಡ್ಡಿ ಹರಿಯುಕನೇ ನಮ್ಮ ಆಟಕ್ಕೆ ಸಿಕ್ಕುದು ರೆಡ್ ಸಿಗ್ನಲ್!

ಮನೆ ಒಳಗೆ ಬಾಕನ ಬೆನ್ನಿಗೆ ಹಾಳೆನ ಕಟ್ಟಿಕಂಡ್ ಬನ್ನಿನೇಂತ ತಾಯಿ ಎಚ್ಚರಿಕೆ ಕೊಡ್ತಾ ಇತ್. ನಮ್ಮಲ್ಲಿ ಅಜ್ಜಿಗಳ್ನ ನಾವ್ ತಾಯಿಂತ ಕರಿತಿದ್ದೊ. ಈಗನ ಮಕ್ಕ ಹಂಗೆ ಕರ್ದವೆಯಾಂತ ಗೊತ್ಲೆ. ಸೂಜಿಗೆ ನೂಲ್ ಹಾಕಿ ತಾಯಿ ಕೈಗೆ ಕೊಟ್ಟರೆ ಸಾಕ್ ನಮ್ಮ ಚಡ್ಡಿಗೆ ಸಿಕ್ತಾ ಇತ್ ಒಂದ್ ಹೊಸ ರೂಪ!

ಅಜ್ಜಿಕಗಳ್ಗೆ ಪಿಳ್ಳೆಗಳ ಮೇಲೆ ತುಂಬಾ ಪ್ರೀತಿ ಇದ್ದದೆ. ಮನೆಂದ ಎಲ್ಲಿಗಾರ್ ಹೋಕನ ಎಲ್ಲಿಗೆ ಹೋದುಂತ ಕೇಳಕ್ಕಾಗದ್, ಕಾಲಿ ಬಿಂದಿಗೆ ನೋಡಕ್ಕಾಗದ್ ಅದೂ–ಇದೂಂತ ಏನೇನೊ ಹೇಳ್ತಾ ಇದ್ದವೆ. ನಾವೆಲ್ಲ ವಿಜ್ಞಾನ ಓದಿದವ್, ವೈಜ್ಞಾನಿಕ ಮನೋಬಾವ ಬೆಳ್ಸಿಕಂಡವ್, ಇದೆಲ್ಲ ಮೂಡನಂಬಿಕೆತ ಹೇಳಿ, ಅಜ್ಜಿಕ ಹೇಳ್ದುನ್ನ ಉದಾಸೀನ ಮಾಡಿ ನಾವು ನೆಗಾಡುವೆ! ಅಜ್ಜಿಕ ಹೇಳ್ದು ನಮ್ಮ ಒಳ್ಳೆದಕ್ಕೆ ತಾನೆ?

ಒಂದ್ ಕಾಲದ ವಿಜ್ಞಾನಿಗ ಭೂಮಿ ನಿತ್ತಲ್ಲೆ ನಿತ್ತುಟ್ಟು ಸೂರ್ಯ ಮತ್ತೆ ಚಂದ್ರ ಭೂಮಿ ಸುತ್ತ ಸುತ್ತುತ್ತಾ ಹೋಳೋಂತ ಹೇಳ್ತಾ ಇದ್ದೊ! ಗೆಲಿಲಿಯೊ ಬಂದ ಮೇಲೆ ಒಳ್ಳೊಳ್ಳೆ ದೂರದರ್ಶಕ ಯಂತ್ರಗಳ್ನ ಕಂಡ್ ಹಿಡ್ದ್ ಹೇಳುವೆ, ಸೂರ್ಯನ ಸುತ್ತ ಭೂಮಿ ಸುತ್ತುತ್ತಾ ಉಟ್ಟು! ಭೂಮಿ ಸುತ್ತಾ ಚಂದ್ರ ಸುತ್ತುತ್ತಾ ಉಟ್ಟೂಂತ!. ನಾವು ಸಾಮಾನ್ಯ ಜನಗ ಅಂದ್ ಅವ್ ಹೇಳ್‌ದನ್ನೂ ಒಪ್ಪಿಕಂಡೊ! ಇಂದ್ ಇವ್ ಹೇಳ್‌ದನ್ನೂ ಒಪ್ಪಿಕಣ್ತಾವೋಳೊ! ನಾಳೆ ಇನ್ನೊಂದ್, ಮತ್ತೊಂದ್ ಹೇಳಿರೂ ಅದ್‌ಕ್ಕೂ ಒಪ್ಪಿಗಯೇ! ತಿರ್ಗಿಸಿ ಪರೀಕ್ಷೆ ಮಾಡುವ ಜ್ಞಾನ ಮತ್ತೆ ಸೌಕರ್ಯ ನಮ್ಗೆ ಇಲ್ಲೆ. ನಾವ್ ನಮ್ಮ ಅಜ್ಜಿಕಗಳ ಮುಂದೆ ಮಾತ್ರ ವಿಜ್ಞಾನಿಗ!

ವಿಜ್ಞಾನದ್ ಅರ್ಥ ಏನ್‌ತ ಕೇಳಿರೆ, ಅಣುಗಳ ಜ್ಞಾನ ಪಡಿಯೊದ್ ವಿಜ್ಞಾನಂತ ವಿಜ್ಞಾನಿಗ ಹೇಳ್ವೆ. ಸಂಸ್ಕೃತಲಿ ವಿಣ್‌ತೇಳಿರೆ ಕನ್ನಡಲಿ ಅಣು. ಅದ್ಕೆ ವಿಣ್ ಜ್ಞಾನನ ವಿಜ್ಞಾನಂತ ಹೇಳ್ವೆ. ಅದೇ ಪ್ರಶ್ನೆನ ತತ್ವಜ್ಞಾನಿಗಳ್ಗೆ ಕೇಳಿರೆ, ವಿಷ್ಣು ಭಗವಾನ್‌ದ್ ಜ್ಞಾನ ಪಡಿಯದು ವಿಜ್ಞಾನಂತ ಹೇಳ್ವೆ! ಅದ್ಕೆ ವಿಷ್ಣು ಜ್ಞಾನನ ವಿಜ್ಞಾನಂತ ಹೇಳ್ವೆ. ಅಣುಗಳ ಜ್ಞಾನ ಪಡಿಯುವ ವಿಜ್ಞಾನ ವಸ್ತು ವಿಜ್ಞಾನ, ಶ್ರೀ ವೆಂಕಟರಮಣ ಸ್ವಾಮಿದ್ ಜ್ಞಾನ ಪಡಿಯುವ ವಿಜ್ಞಾನ ಆಧ್ಯಾತ್ಮ ವಿಜ್ಞಾನ. ವಸ್ತು ವಿಜ್ಞಾನನ ಯಂತ್ರಗಳ್‌ಂದ ತಿಳ್ಕಣಕ್ಕ್. ಆಧ್ಯಾತ್ಮ ವಿಜ್ಞಾನನ ಮಂತ್ರಗಳ್‌ಂದ ತಿಳ್ಕಣಕ್ಕ್. ವಸ್ತು ವಿಜ್ಞಾನ ಇಂಟರ್‌ನೆಟ್ ಸಂಪರ್ಕ ಇಲ್ಲದ ಕಂಪ್ಯೂಟರ್ ತರ. ಆಧ್ಯಾತ್ಮ ವಿಜ್ಞಾನ ಇಂಟರ್ ನೆಟ್ ಸಂಪರ್ಕ ಇರುವ

ಕಂಪ್ಯೂಟರ್ ತರ. ಇವ್ ಎರ್ಡ್ ವಿಜ್ಞಾನಗ ಒಂದಾದರೆ ಮಾತ್ರ ಅದ್ ನಿಜಾದ ವಿಜ್ಞಾನ ಆದೆ. ವಸ್ತು ವಿಜ್ಞಾನದ್ ಕಟ್ಟಡನ ಆಧ್ಯಾತ್ಮ ವಿಜ್ಞಾನದ ತಳಪಾಯ ಮೇಲೆ ಕಟ್ಟಿರೆ ಮಾತ್ರ ಕಟ್ಟಡ ಬಿಗಿಯಾಗಿ ನಿತ್ತದೆ!

ನಾಸಾದ ವಿಜ್ಞಾನಿಗ, ಕ್ಯೂರಿಯಾಸಿಟಿ ರೋವರ್‌ತೇಳುವ ನೌಕೆನ ಮಂಗಳ ಗ್ರಹಲಿ ಇಳ್ಸಿ ಸಂಶೋಧನೆ ಮಾಡ್ತಾವೊಳೊ. ಅಲ್ಲಿ ಅವ್ಕೆ "ಪರ್ಸೀವರೆನ್ಸ್ ವ್ಯಾಲಿ"ತೇಳುವ ಜಾಗಲಿರುವ ಕಲ್ಲ್‌ದ್ ಹಾಳೆಗ ಭೂಮಿಲಿ ಇರುವ ಕಾಗೆಬಂಗಾರಕ್ಕೆ ಹೋಲಿಕೆ ಆಗುವ ಸಂಗತಿ ತಿಳ್ದ್ ಬಂದುಟ್ಟು! .ನಮ್ಮ ಪೂರ್ವ ಕಾಲದ ಋಷಿಮುನಿಗ "ಶಕ್ತಿ ಹಸ್ತಾಯ ವಿದ್ಮಹೇ ಭೂಮಿ ಪುತ್ರಾಯ ಧೀಮಹೀ ತನ್ನೊ ಅಂಗಾರಕ ಪ್ರಚೋದಯಾತ್".ತ ಮಂಗಳ ಗ್ರಹಕ್ಕೆ ಸಂಬಂದ ಪಟ್ಟ ಒಂದ್ ಗಾಯತ್ರಿ ಮಂತ್ರನ ಬರ್ದ್ ಮಡಿಗಿಯೋಳೊ. ಅವ್ ಮಂಗಳ ಗ್ರಹನ ಭೂಮಿದ್ ಪುತ್ರ – ಅಂದರೆ ಭೂಮಿದ್ ಮಂಜಂತ ಹೇಳಿದ್ದೊ. ಈಗ ಕಂಡ್ ಬಂದ ಕಲ್ಲ್‌ದ್ ಹೋಲಿಕೆತರ, ಇನ್ನೂ ಎಷ್ಟೋ ಹೋಲಿಕೆಗಳ್ನ ಋಷಿಮುನಿಗ ತಮ್ಮ ಆಧ್ಯಾತ್ಮ ವಿಜ್ಞಾನಂದ ತಿಳ್ಕಂಡಿದ್ದೊ ಮತ್ತೆ ಅಂತ ಹೋಲಿಕೆಗ ಇರ್ದರ್‌ಂದ ಮಂಗಳ ಗ್ರಹನ ಭೂಮಿದ್ ಮಂಜಂತ ಅಂದೇ ಹೇಳಿದ್ದೊ!

ಹಗ್ಲ್ ನಕ್ಷತ್ರಗ ಕಾಂಬದುಲ್ಲೆತೇಳಿ, ನಕ್ಷತ್ರಗ ಇಲ್ಲೆಂತ ಹೇಳುದ್ ಎಷ್ಟು ತಪ್ಪೋ, ಹಂಗೆ ನಮ್ಮ ಅಜ್ಜಿಕ ಹೇಳುವ ಸಂಗತಿಗಳ ಕಾರಣ ಗೊತ್ತಿಲ್ಲದೆ ಮೂಡನಂಬಿಕೆತ ಉದಾಸೀನ ಮಾಡಿ ನೆಗಾಡುದು ಅಷ್ಟೇ ತಪ್ಪು! ಇದ್ಕೆಲ್ಲಾ ಉತ್ತರನ ಕಂಡ್‌ಕಣುವ ತಂತ್ರನ ನಾವೇ ಕಲಿಯಕು. ಅದ್ಕೆ ಇರುವ ಉಪಾಯ ಒಂದೇ – ಯಂತ್ರಂದ ತಿಳ್ಕಣುವ ವಸ್ತು ವಿಜ್ಞಾನದ ಒಟ್ಟಿಗೆ ಮಂತ್ರಂದ ತಿಳ್ಕಣುವ ಆಧ್ಯಾತ್ಮ ವಿಜ್ಞಾನನ ಕಲಿಯುವ ಮನ್ಸ್ ಮಾಡುದು ಅಷ್ಟೆ!!

---

## ಮರೆಕಾಗದ್

–ಹೊಸೊಳಿಕೆ ಯೋಗೀಶ್

ನಂಬಿದವರ ನಾವು ಮರೆಕಾಗದ್
ಕಳ್‌ದ ಕಷ್ಟದ ದಿನಗಳ ಮರೆಕಾಗದ್

ಹೊತ್ತು ಹೆತ್ತ ಅಪ್ಪ ಅಮ್ಮನ ಮರೆಕಾಗದ್
ವಿದ್ಯೆ ಬುದ್ಧಿ ಹೇಳ್ದ ಗುರುಗಳ ಮರೆಕಾಗದ್

ಹೆಂಣ್ ತವರ್‍ನ ಮರೆಕಾಗದ್
ಅತ್ತೆ ಮಾವಂಗೆ ಬೈಯೆಕಾಗದ್

ಗಂಡ ಹೆಂಣ್‌ನ ಒಂದಿಸಿಕಾಗದ್
ತುಂಬು ಸಂಸಾರನ ಒಡೆಕಾಗದ್

ಕೆಲಸ ಮಾಡದೆ ಕುದ್ರಿಕಾಗದ್
ನಾನೇ ಜನತ ಮೆರೆಕಾಗದ್

ದುಡ್ಡುನ ಹಾಂಕರ ತೋರ್ಸಿಕಾಗದ್
ಎಲ್ಲಾರೊಟ್ಟಿಗೆ ಒಂದೇ ಆವುದರ ಮೆರೆಕಾಗದ್

ಚಾಡಿ ಲೊಟ್ಟೆ ಹೇಳಿಕಾಗದ್
ನಮ್ಮತನನ ನಾವು ಮರೆಕಾಗದ್

ಬೇರೆಯವರ ಬಗ್ಗೆ ಹೊಟ್ಟೆಕಿಚ್ಚಿ ಪಡಿಕಾಗದ್
ನಮ್ಮ ಕಾಲ್‌ಲಿ ನಾವು ನಿಲ್ಲುದರ ಮರೆಕಾಗದ್

## ಪೊನ್ನಿ ತಿಂಗಳ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| ಹೆಸ್ರ್ | ವಯಸ್ | ತೀರ್ದ ತಾರೀಖ್ | ಹೆಸ್ರ್ | ವಯಸ್ | ತೀರ್ದ ತಾರೀಖ್ |
|---|---|---|---|---|---|
| ಕೊಂಬನ ಬೊಳ್ಳವ್ವ | 83 | 26–1–2018 | ಅಂಬ್ರಾಟಿ ಪ್ರಶಾಂತ್ | 38 | 20–2–2018 |
| ದೇಶಕೋಡಿ ವಾಸುದೇವ | 63 | 27–1–2018 | ಕೇಕಡ ಗಣಪತಿ | 96 | 23–2–2018 |
| ಹೊಸೂರು ಪಾರ್ವತಿ | 67 | 27–1–2018 | ಹುದೇರಿ ಅಮ್ಮವ್ವ | 86 | 23–2–2018 |
| ನಡುಬೆಟ್ಟಿ ಪ್ರೇಮ | 52 | 27–1–2018 | ಅಣ್ಣಚಿರ ಪಾರ್ವತಿ | 74 | 25–2–2018 |
| ಮುಕ್ಕಾಟಿ ಚಂಗಪ್ಪ | 85 | 27–1–2018 | ಚಿಲ್ಲನ ದರ್ಶನ್ (ಪಾಪು) | 31 | 26–2–2018 |
| ಯಾಲದಾಳು ಕಮಲ | 68 | 27–1–2018 | ತೂಟೇರ ಕಾರ್ಯಪ್ಪ | 81 | 28–2–2018 |
| ಸೆಟ್ಟೆಜನ ಗೋಪಾಲ | 83 | 28–1–2018 | ಆನೇರ ಪೊನ್ನಪ್ಪ | 78 | 26–2–2018 |
| ಪಾಕಮುಕ್ಕಾಟಿ ಜ್ಯೋತಿ | 58 | 30–1–2018 | ಸೆಟ್ಟೆಜನ ಎಂ. ಮಾಚಯ್ಯ | 84 | 28–2–2018 |
| ನಡುಗಲ್ಲು ಚಿದಾನಂದ | 39 | 1–2–2018 | ಮಳ್ಳಂದೀರ ಭಾಗೀರತಿ | 52 | 4–3–2018 |
| ಯಾಲದಾಳು ಹರಿಪ್ರಭು | 45 | 2–2–2018 | ಪಂಜಿಮಲ್ಲೆ ತನುಜಾ | 20 | 4–3–2018 |
| ಕುಂಬಳಚೇರಿ ಗೌರಮ್ಮ | 89 | 2–2–2018 | ಕಾಸ್ಪಾಡಿ ಪ್ರಕಾಶ್ | 42 | 4–3–2018 |
| ಕುಕ್ಕೇರ ಸಂಪತ್ (ಬೆಲ್ಲು) | 30 | 3–2–2018 | ಕುಂಜುರನ ಪೊನ್ನಪ್ಪ | 86 | 8–3–2018 |
| ಬೈಮನ ಪಾಲಿ | 65 | 5–2–2018 | | | |
| ಚೆದುಕಾರ್ ಕಾವೇರಮ್ಮ | 84 | 8–2–2018 | | | |
| ಸೂರ್ತಲೆ ರುಕ್ಮಿಣಿ | 82 | 8–2–2018 | | | |
| ಕೊಂಪುಳಿ ಪೂವಮ್ಮ | 79 | 9–2–2018 | | | |
| ಮಂಞಾಂಡ್ರ ರುಕ್ಮಿಣಿ | 82 | 10–2–2018 | | | |
| ಮಂಞಾಂಡ್ರ ಗೋಪಾಲ | 66 | 11–2–2018 | | | |
| ಬೊಳ್ತಜಿರ ಬಾಲಕೃಷ್ಣ (ರವಿ) | 59 | 12–2–2018 | | | |
| ಪಡ್ಪು ಬಾಬು | 85 | 15–2–2018 | | | |
| ಮಡಿಯನ ಶಿವಪ್ಪ | 92 | 16–2–2018 | | | |
| ಅಂಬ್ರಾಟಿ ಪ್ರೇಮಾವತಿ | 62 | 17–2–2018 | | | |
| ಯಾಳದಾಳು ಕಮಲ | 73 | 18–2–2018 | | | |
| ಅಂಚೇರ ಮಾಚಯ್ಯ | 79 | 20–2–2018 | | | |

*ನಾಙ್ಗೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ.
ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಟ್ಟಿಗೆ ಹಂಚಿಕಣಿ.

## ಹಳಬರ ಜೋಳಿಗೆ

## ಜಯಮ್ಮ ಚೆಟ್ಟಿಮಾಡ ಅವರ ಹಳಬರ ಜೋಳಿಗೆ ಸಂಚಿಕೆಂದ ಆರ್ಸಿದ ಕಥಾ ಮಾಲಿಕೆ–8

ಎತ್ತ್‌ನ ಬಂಡಿ

**ಕತೆ ಕೊಟ್ಟವು:** ಕೈಂತಜೆ ವಿಷ್ಣು ಭಟ್ಟ

ಇಂದಿಗೆ ಐವತ್ತು ಸಂವತ್ಸರಗಳ ಹಿಂದೆ ಎತ್ತಿನ ಬಂಡಿಗ ಸುಪ್ರಸಿದ್ಧ ಸಂಚಾರವಾಹನಗ. ವಾಣಿಜ್ಯ ಆಹಾರ ಬೆಳೆಗಳ್ನ ಹೆಳ್ಳಿಂದ ಪಟ್ಟಣಕೆ , ಪಟ್ಟಣದ ಹಳ್ಳಿ ಕಡೆ ಸಾಗಿಸಿಕೆ ಉಪಯೋಗಿಸುವ ವಾಹನ ಆಗಿತ್ತ್. ಅಷ್ಟುಮಾತ್ರವೇ ಅಲ್ಲದೆ ಅನಾರೋಗ್ಯ ಹೊಂದಿದವರ್ನ, ಬೇರೆಕಡೆ ಮೃತಪಟ್ಟವರ್ನ, ಮದುವೆ ದಿಬ್ಬಣ, ಗರ್ಭಿಣಿಯರ್ನ ಒಂದೆಡೆಂದ ಇನ್ನೊಂದು ಕಡೆಗೆ ಸಾಗಿಸಿಕೆ ಇದರದೇ ಉಪಯೋಗ.

ಎತ್ತಿನ ಬಂಡಿಗಳ್ಲಿ ಎರಡು ತರ. ಒಂದೆತ್ತು ಎಳೆವ ಬಂಡಿ, ಎರಡೆತ್ತ್ ಎಳೆವ ಬಂಡಿ. ಇದನ್ನೇ ಎತ್ತಿನ ಗಾಡಿ ತ ಕರ್ದವೆ. ಇಂದಿಗೂ ಗಾಡಿ ತೇಲೊ ಶಬ್ದ ಮೋಟಾರು ವಾಹನಗಳಿಗೂ ಬಳ್ಸಿವೆ. ತುಳುಲಿ ಲಾರಿಯ ಚಾಲಕ 'ಗಾಡಿ ಒಯುಪ್ಪುಜಿ' ತ ಹೇಳುವ ಕ್ರಮ ಉಟ್ಟು. ಒಂದೆತ್ತಿನ ಗಾಡಿನ ಹೆಚ್ಚಾಗಿ ಪಟ್ಟಣಗಳ ಒಳ ರಸ್ತೆಲಿ ಸರಕು ಸಾಗಣೆಗಳಿಗೆ ಉಪಯೋಗ ಮಾಡುವೆ. ಎರಡೆತ್ತಿನ ಗಾಡಿ ದೂರದ ಸರಕು ಸಾಗಣೆಗೆ ಉಪಯೋಗಿಸುತ್ತಾ ಇದ್ದೊ. ಹಿಂದೆ ಎತ್ತಿನ ಗಾಡಿಗಳ್ಲೇ ಕೊಡಗ್‌ಂದ ಮಂಗಳೂರ್‌ಗೆ ಕಾಫಿ ಸಾಗಿಸ್ತಾ ಇದ್ದೊ. ಈ ಕಾಫಿ ಸಾಗಾಟದ ಗಾಡಿಗ ಒಂದಲ್ಲ ಎರಡಲ್ಲ ಮೂವತ್ತೈದ್ ಗಾಡಿಗ ವರೆಗೂ ಒಂದರ ಹಿಂದೆ ಮತ್ತೊಂದು ಸಾಲಾಗಿ ಹೋಗ್ತಾ ಇದ್ದೊ. ಎಲ್ಲ ರಾತ್ರಿ ಹೊತ್ತೇ ಪಯಣ. ಅಲ್ಲಲ್ಲಿ ಹಗಲ್ ಹಂಞ ಹೊತ್ತ್ ನಿತ್ತ್ ಕೊಡಗ್‌ಂದ ಮಂಗಳೂರ್‌ಗೆ ಸಾಮಾನ್ಯವಾಗಿ ಆರ್ ದಿನಗಳ್ಲಿ ತಲ್ಪ್‌ತಾ ಇದ್ದೊ.

ಮಂಗಳೂರ್‌ಗೆ ಹೋಕನ ಕಾಫಿ ಏಲಕ್ಕಿ ತಕಂಡ್ ಹೋದರೆ ಅಲ್ಲಿಂದ ಬಾಕನ ತೆಂಗಿನಕಾಯಿ, ಬೆಲ್ಲ, ಉಪ್ಪು ಮೆಣ್ಸ್, ಸಂಭಾರ ಸಾಮಾನ್‌ಗಳ್ನ ಕೊಡಗಿಗೆ ಸಾಗಿಸ್ತಾ ಇದ್ದೊ. ರಾತ್ರೆ ಗಾಡಿಗಳ ಓಡ್ಸ್‌ಕನ ಲಾಟೀನ್ (ಕಂದೀಲು) ಹಚ್ಚಿ ಗಾಡಿ ಎಳ್ಕಂಡ್ ಅಭ್ಯಾಸ ಬಲಂದ ಮುಂದೆ ಹೋಗ್ತಾ ಇದ್ದೊ. ಇಂಥಹ ಗಾಡಿಗ ಸಂಚರಿಸ್‌ಕಾಕನ ಹುಲಿಗ ದಾರಿ ಕಾರೆಲಿ ಕಾಂಬೊತ್ತಿದ್ದೊ ಉಟ್ಟು. ಆ ಹೊತ್ತ್‌ಲಿ ಎತ್ತುಗಳ್‌ಗೆ ಹುಲಿಯ ವಾಸನೆ ಸಿಕ್ಕಿ ಕೆಮಿ ನಿಮ್‌ರ್‌ಸಿ ಅತ್ತಿತ್ತ ಮಾಡಿ ಭುಸುಗುಡುತ್ತ ಹಂಞ ಜೋರಾಗಿ ಮುಂದೆ ಹೋಗ್ತಾ ಇದ್ದೊ. ಹಂಗೆತ ಕಂಡ ಹುಲಿಗ ಎಲ್ಲ ಎತ್ತುಗಳ ಮೇಲೆ ಧಾಳಿ ಮಾಡ್ದ ಉದಾಹರಣೆ ಇಲ್ಲೆ. ಹುಲಿಗ ರಾಜಾರೋಷವಾಗಿ ಎರಗುವ ಪ್ರಾಣಿ ಅಲ್ಲ, ಹೊಂವು ಹಾಕಿ ಹಿಡಿಯದೇ ಅವುಗಳ ಕ್ರಮ.

ಸುಮಾರ್ ಐವತ್ತು ವರ್ಷಗಳ ಹಿಂದೆ ಎತ್ತಿನಗಾಡಿ ಇಟ್ಟುಕಂಬದು ತೇಳ್ರೆ ಒಂದು ಹೆಮ್ಮೆನ ವಿಷಯ. ಕೆಲವರ್ ಜೀವನೋಪಾಯಕ್ಕಾಗಿನೇ ಎತ್ತಿನ ಗಾಡಿಗಳ ಉಪಯೋಗಿಸುತ್ತಿದ್ದೊ. ಕೆಲವು ಮನೆಗಳ್ಲಿ ಒಂದು ಜೊತೆ ಎತ್ತುಗಳ್‌ಗೆ ಎರಡು ಗಾಡಿಗ ಇರ್ತಾ ಇತ್ತ್. ಒಂದು ಗಾಡಿ ಸರಕು ಸಾಗಣೆಗಾದರೆ ಇನ್ನೊಂದು ಎಲ್ಲಾದರ್ ಹೋಗಿ ಬಾಕೆ ಇತ್ತ್. ಈ ಗಾಡಿಗೆ ಲಾಯ್ಕಲಿ ಮೆತ್ತನೆ ಕಂಬಳಿ ಹೋಸಿ, ಮಾನ್ ಎಲ್ಲ ಮಾಡಿ ಇಡ್ತಾ ಇದ್ದೊ.

ಗಾಡಿ ರಚನೆಲಿ ನುರಿತವು ಮಾತ್ರ ಗಾಡಿ ಮಾಡ್ತಾ ಇದ್ದೊ. ಸಾಮಾನ್ಯ ಎತ್ತುಗಳಿಗೂ ಹೊಂದಿಕೆ ಆಗುವಂಗೆ ಗಾಡಿ ರಚನೆ ಮಾಡ್ತಾ ಇದ್ದೊ. ಗಾಡಿಗಾಗಿ ಹೆಚ್ಚಾಗಿ ಬೈಲಹೊನ್ನೆ, ಸಾಗುವಾನಿಮರಗಳನ್ನೇ ಉಪಯೋಗಿಸುತ್ತಿದ್ದೊ. ಗಾಡಿಗಳ್ಲಿ ಕಬ್ಬಿಣನ ಬಾಳ ಕಮ್ಮಿ ಉಪಯೋಗಿಸ್ತಾ ಇದ್ದೊ. ಗಾಡಿಗಳ ಚಕ್ರಗಳ್ನ ಆಧರಿಸಿ

ಗಟ್ಟಿಯಾಗಿ ಹಿಡಿಯುವ ಮಧ್ಯ ರ್ಚಕವಾಗಿ ತುದಿ ಚಕ್ರ ನಿಲ್ಲುವ ಜಾಗೆ ಉರುಟಾಗಿ, ತುದಿಮೊಂಡಾಗಿ ಚಕ್ರ ಹೊರಗೆ ಹೋಗದಂಗೆ ಆಚೀಚೆ ಎರಡ್ ತೂತುಗ ಇದ್ದವೆ. ಇದನ್ನ 'ಸಬ್ಬಲ್' ತ ಕರ್ದವೆ. ಗಾಡಿಯ ಚಕ್ರನ ಮರಂದ ಮಾಡಿದ್ದ್ ಅದ್ ಸವೆಯದಂಗೆ, ಒಡೆಯದಂಗೆ ಹೊರಗೆ ಕಬ್ಬಿಣದ ಪಟ್ಟೆಗಳ್ನ ಹಾಕುವೆ. ಗಾಡಿಯ ಉದ್ದ ಮರಕ್ಕೆ ಜೋಡಿಸುವ ಉದ್ದದ ಜೆಂಡಾಣೆ, ಗಾಡಿಯ ಚೌಕನ ಬಿಗಿವ ಎರಡ್ ಸರಳ್‌ಗ ಗಾಡಿಯ ಚಕ್ರದ ಹೊರಬದಿಗೆ ಚಕ್ರ ಹೊರಗೆ ಜಾರದಂಗೆ ಸಿಕ್ಕಿಸುವ ಕಡಾಣೆ ಇದಿಷ್ಟ್ ಕಬ್ಬಿಣದ ಸಾಮಾನ್‌ಗ, ಇನ್ನ್ ಬಾಕಿ ಎಲ್ಲ ಮರದಂನೇ ತಯಾರಾದೆ. ಗಾಡಿಯ ಮಾಡ್‌ನ ತೋರದ ಬೆತ್ತನ ಕಮಾನಾಗಿ ಬಗ್ಗಿಸಿ ಅದರ ಮೇಲೆ ಅಡ್ಡ ಬಿದಿರ್‌ನ ಸಲಿಕೆ ಕಟ್ಟಿ ಅದರ ಮೇಲೆ ಬಿದಿರಿನ ಅತ್ತರು ಹಾಸಿ ಮೇಲೆ ಸತುವಿನ ತಗಡ್ ಇಟ್ಟ್ ಹುರಿಹಗ್ಗಂದ ಕಟ್ಟಿ ಭಧ್ರಪಡ್ಸುವೆ.

ಗಾಡಿಯ ಬಿಡಿ ಭಾಗಗಳ ಹೆಸ್ರ್ ಹೇಳಿರೆ ವಿಚಿತ್ರ ತ ಅನ್ಸುದು ಚಕ್ರರಚನೆಲಿ ಗುಮ್ಮೆ, ಕಾಲು, ವಾಂಕು ಪಟ್ಟೆಗ. ಚೌಕ, ನಡುಮರ, ಉದ್ದಮರ, ಕತ್ತರಿ, ನೊಗಮರ, ಬಳಕುಟ್ಟಿ, ಹೊರ ಕುಟ್ಟಿ, ಒಳ ಕುಟ್ಟಿ, ಮೂಂಕಿ, ಹಿಂದಕ್ಕೆ ಹಲಿಗೆ ನೆರೆಪ್ಪುಗಳು. ಗಾಡಿಗಳಿಗೆ ಅಲ್ಲಲ್ಲಿ ಕಟ್ಟುಗಳ ಬಿಗಿಯಕೆ ಹುರಿ ಹಗ್ಗಗಳ್ನೇ ಉಪಯೋಗಿಸ್ತಾ ಇದ್ದೊ. ಮುಖ್ಯವಾಗಿ ಗಾಡಿ ಹಗುರವಾಗಿ ಗಟ್ಟಿ ಮುಟ್ಟಾಗರಕು. ಪೇಟೆಗಲ್ಲಿ ಎತ್ತಿನ ಗಾಡಿಗಳಿಗೆ ಕಬ್ಬಿಣ ಬಳ್ಸಿ ಬಸ್ಸ್‌ನ ಚಕ್ರಗಳನ್ನ ಹಾಕಿ ಪೆಟ್ರೋಲ್, ನೀರು ಸಾಗಿಸ್ತಾ ಇದ್ದೊ. ಪೆಟ್ರೋಲ್‌ನ ಹಿಂದೆನ ಕಾಲಲಿ ಕಲ್ಲೆಣ್ಣೆ ತ ಕರೆತಿದ್ದೊ. ಆಗ ವಾಹನಗ ಬಾಳ ಕಮ್ಮಿ ಇದ್ದ ಸಮೆಯ. ಈ ಗಾಡಿಗಳಿಗೆ ಜೋಡೆತ್ತುಗಳ್ನೇ ಬಳಸ್ತಾ ಇದ್ದೊ. ಸುರುನ ಸಮಯಲಿ "ಜೋಡೆತ್ತು" ಕಾಂಗ್ರಸ್‌ನ ಚಿಹ್ನೆ ಆಗಿತ್ತ್.

ಗಾಡಿ ಎತ್ತ್‌ಗಳಿಗೆ ಗೊರಸು ಸವೆಯದಂಗೆ ಲಾಳ ಹೊಡೆಯುವವು ಪ್ರತಿ ಗಾಡಿ ತಂಗುವ ಜಾಗೆಲಿ ಇರ್ತಾ ಇದ್ದೊ. ಲಾಳ ಹೊಡೆದನ ನೋಡಿಕೆ ಮಕ್ಕ, ಹಿರಿಯರ್ ಎಲ್ಲಾ ಸೇರ್ತಾ ಇದ್ದೊ. ಗಾಡಿಯೆತ್ತ್‌ನ ನೋವಾಗದಂಗೆ ಹಗ್ಗ ಹಾಕಿ ಅಡ್ಡ ಬೀಳ್ಸುವ ಕ್ರಮ ಬಾಳ ಮೋಜಿನದು. ಅರ್ಧಚಂದ್ರಾಕೃತಿಯ ಹಿಡಿ ಇರುವ ಕತ್ತಿಂದ ಗೊರಸಿನ ತುದಿಭಾಗ ಬೆಳೆದದ್ದನ್ನ ಕತ್ತರಿಸಿ ತೆಗ್ದ್ ಹೊಸಲಾಳ ಹೊಡೆಯುವ ಕ್ರಮ ಸ ಮೋಜಿನದೇ. ಲಾಳ ಹೊಡೆಯಕನ ಹೆಚ್ಚಿನ ಜಾಗರೂಕತೆ, ಅಭ್ಯಾಸವಿದ್ದವು ಮಾತ್ರ ಮಾಡ್ತಾ ಇದ್ದೊ.

ಗಾಡಿ ಎತ್ತುಗಳ ಶೃಂಗಾರ ಸಾಮಾನ್‌ಗ ಅಂಗಡಿಗಲ್ಲಿ ಹೊರಬದಿಗೆ ತೂಗು ಹಾಕ್ತಾ ಇದ್ದೊ. ತರತರದ ಹಿತ್ತಾಳಿತಾಳಿ, ಗೆಜ್ಜೆ, ಗಂಟೆಮಣಿ, ಕವಡೆಗಳ್‌ಂದ ಪೋಣಿಸಿದ ಕುತ್ತಿಗೆ ಮಾಲೆಗ, ಮಧ್ಯಕ್ಕೆ ಕನ್ನಡಿ ಇಟ್ಟ ಉಣ್ಣೆಯ ನೂಲಿನ ಮೊಕರಂಬು, ಚಿತ್ರ ವಿಚಿತ್ರ ಬೆನ್ನಿನ ಗೌಸುಗ, ಕುತ್ತಿಗೆ ಮಾಲೆಗೆ ತೂಗುಹಾಕುವ ಕಪ್ಪು ಬಿಳಿ ಬಣ್ಣದ ಗೊಂಡೆಗ, ಬೇರೆ ಬೇರೆ ನೆಯಿಗೆಂದ ಕೂಡಿದ ಚಾಟಿಗ ಇವೆಲ್ಲ ಶೃಂಗಾರ ಸಾಧನಗ, ಇಂದಿಗೆ ಇವುಗಳೆಲ್ಲ ಸಿಕ್ಕುದು ಬಾಳ ಕಮ್ಮಿ.  ವಸ್ತು ಸಂಗ್ರಹಾಲಯಲಿ ಸ ಇರಿಕಿಲೆ. ಕೆಲವು ವರ್ಷಗಳ ಕಳ್ದ ಮೇಲೆ ಎತ್ತುಗಳ ಗಾಡಿಗ ಪಳೆಯುಳಿಕೆ ಆದು. ಮುಂದಿನ ಮಕ್ಕಳಿಗೆ ಇದು ನೋಡಿಕೆಸ ಸಿಕ್ಕಿಕಿಲೆ ಕಂಡದೆ. ಮುಂದೆ ಇದ್ ಹಳಬರ ಜೋಳಿಗೆಲೇ ಉಳ್‌ಕಂಡದೆ.

**ಸಂಗೀತಾ ರವಿರಾಜ್ ಅವ್ಕೆ ಗೌರಮ್ಮ ದತ್ತಿ ಪುರಸ್ಕಾರ**

ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ವತಿಂದ ಕೊಡಮಾಡುವ ಗೌರಮ್ಮ ದತ್ತಿ ಪುರಸ್ಕಾರ ಲೇಖಕಿ ಹೊಸೂರು ಸಂಗೀತ ರವಿರಾಜ್ ಅವರ 'ಕಪ್ಪು ಹುಡುಗಿ' ಕೃತಿಗೆ ಸಿಕ್ಕುಟು. ಮಾರ್ಚ್ 5 ರಂದ್ ಪ್ರಶಸ್ತಿ ಸಮಾರಂಭ ನಡ್ತ್.

## ಬೆಂಗಳೂರ್‌ಲಿ ನಡ್ದ ಕೇರಂ ಮತ್ತೆ ಚದುರಂಗ ಪೈಪೋಟಿ

ಕೊಡಗು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು ಇದರ ಯುವ ಘಟಕದ ವತಿಂದ ಕಳ್ದ ಫೆಬ್ರವರಿ ತಾರೀಖ್ 25ಕೆ ಬೆಂಗಳೂರ್‌ನ ಕೆ.ಡಿ.ಕೆ ಗೌಡ ಸಮಾಜ ಲಗ್ಗೆರೆಯ 'ನಮ್ಮನೆ' ಸಾಂಸ್ಕೃತಿಕ ಕೇಂದ್ರಲಿ ಮುಕ್ತ ವಿಭಾಗಲಿ ಚದುರಂಗ, ಮಹಿಳೆಯರು ಮತ್ತು ಪುರುಷರ ವಿಭಾಗಲಿ ಕೇರಂ ಮತ್ತು ಮುಕ್ತ ವಿಭಾಗಲಿ ಕೇರಂ ಡಬಲ್ಸ್ ಪಂದ್ಯಾಟಗ ನಡ್ತ್.

ಜಂಬರನ ಹೊತ್ತಾರೆ 9 ಗಂಟೆಗೆ ಸುರು ಆತ್. ಆಟದ ದಿನ ಸ ನೋಂದಾವಣಿ ಮಾಡಿಕೆ ಅವಕಾಶ ಮಾಡಿ ಕೊಟ್ಟೊ. ಅಂತರ್‌ಜಾಲದ ಮೂಲಕ ಸುಮಾರ್ 49 ಕ್ಕೂ ಹೆಚ್ಚ್ ಜನ ತಮ್ಮ ಹೆಸರ್‌ನ ನೋಂದಾಯಿಸಿದ್ದೊ. ಅಂದ್‌ನ ದಿನ ಸುಮಾರ್ 25 ಜನರ ಸೇರಿ ಒಟ್ಟು 65ಕ್ಕೂ ಹೆಚ್ಚ್ ಜನ ಭಾಗವಹಿಸಿದ್ದೊ.

ಸಮಾಜದ ಸದಸ್ಯರ ಉಪಸ್ಥಿತಿಲಿ ಶ್ರೀಮತಿ ಪೋರೆಯನ ನೇಹನವ್ರ ಪ್ರಾರ್ಥನೆಯೊಂದಿಗೆ ಜಂಬರಕ್ಕೆ ಚಾಲನೆ ಸಿಕ್ಕಿತ್. ಮೂಡಗದ್ದೆ ವಿನೋದ್ ರವರು ಸಭಿಕರನ್ನು ಜಂಬರಕ್ಕೆ ಸ್ವಾಗತಿಸಿದೊ ಹಂಗೆನೆ ಯುವಘಟಕದ ಅಧ್ಯಕ್ಷರಾದ ಅಡ್ಕಾರ್ ಪ್ರಶಾಂತ್ ಅವರು ಪ್ರಾಸ್ತಾವಿಕ ನುಡಿಗಳ್ನ ಆಡ್ದೊ. ನೆರೆದಿದ್ದವರ ಸಮ್ಮುಖಲೇ ಎಲ್ಲಾ ವಿಭಾಗದ ಪಂದ್ಯಾಟಕ್ಕೆ



ಟೈಸ್‌ಅನ್ನು ಹಾಕಲಾತ್. ಶಿಶಿರ್ ಸೂದನ ಮತ್ತೆ ಧನುಷ್ ಕಡ್ಲೇರ ಪಂದ್ಯಾಟದ ನೀತಿ-ನಿಯಮಗಳ್ನ ವಿವರಿಸಿದೊ. ಎಲ್ಲಾ ಆಟಗಾರರ್ ಇದೇ ಸುರುಗೆ ಕೆ.ಡಿ.ಕೆ ವತಿಂದ ಏರ್ಪಡಿಸಿದ್ದ ಕೇರಂ ಹಂಗೆ ಚದರುಂಗ ಆಟಲಿ ಬಾಳ ಉತ್ಸಾಹಂದ ಭಾಗವಹಿಸಿದೊ.

ನೆರೆದಿದ್ದ ಆಟಗಾರರ್‌ಗೆ ಹಂಗೆ ಕ್ರೀಡಾಭಿಮಾನಿಗಳ್‌ಗೆ ಮಧ್ಯಾಹ್ನನ ಊಟದ ವ್ಯವಸ್ಥೆ ಮಾಡಲಾಗಿತ್ತ್. ಮದ್ಯಾಹ್ನದ ಮೇಲೆ ನಡ್ದ ಕೊನೆಯ ಹಂತದ ಪಂದ್ಯಾಟಗಳ್ಲಿ ಜಯಶೀಲರಾದವ್:

ಚದುರಂಗ: ಸುರುನ ಇನಾಮು- ಮಿಥುನ್ ಚೀಯಪ್ಪನ, ಎರಡನೇ ಇನಾಮು- ಜಯದೇವ್ ಪರಮಲೆ, ಕೇರಂ- ಪುರುಷರ ವಿಭಾಗ - ಸುರುನ ಇನಾಮು- ದೀಪು ಕಟ್ಟೆಮನೆ, ಎರಡನೇ ಇನಾಮು -ಉಮೇಶ್ ಕಾನೆಹಿತ್ಲು, ಮಹಿಳೆಯನುರ ವಿಭಾಗಲಿ ಸುರುನ ಇನಾಮುನ-ದ್ವಿತಿ ಉಡದೋಳಿ, ಎರಡನೇ ಇನಾಮು- ನೇಹಾ ಪೋರೆಯನ, ಕೇರಂ ಮುಕ್ತ ಡಬಲ್ಸ್‌ಲಿ ಸುರುನ ಇನಾಮು ದೀಪು ಕಟ್ಟೆಮನೆ ಮತ್ತೆ ಕಿಶೋರ್ ಕೊಟ್ಟಂಗೇರಿ, ಎರಡನೇ ಇನಾಮು- ಧನುಷ್ ಕಡ್ಲೇರ ಮತ್ತೆ ಪ್ರಸನ್ನ ಪುತ್ತೂರು ಇವು ಪಡ್ಕಂಡೊ.

ಜಯಶೀಲರಾದ ಕ್ರೀಡಾ ಪಟುಗಳಿಗೆ ಹಿರಿಯ ಸದಸ್ಯರಾದ ಕುಂಡ್ಯನ ವಿಶಾಲಾಕ್ಷಿ ಹಂಗೆ ಪೂಣಚ್ಚನವು ಬಹುಮಾನ ವಿತರಿಸಿದೊ.

## ಹೋದೆರ ಬಾವ ನಾನೊಂದು ಮದುವೆಗೆ

–ಮರದಾಳ್ ಕವನ ತೇಜೇಶ್

ಹೋದೆರ ಬಾವ ನಾನೊಂದು ಮದುವೆಗೆ ಕೇಳ್‌ರ ಬಾವ ನನ್ನ ಕಥೆನ
ಹೋದೆರ ಬಾವ ನಾನೊಂದು ಚಪ್ಪರಕೆ ಕಂಡೇರ ಬಾವ ನಾನೊಂದು
ಪೊರ್ಲುನ ಗೂಡೆನಾ ನೋಡಿ ಮರ್ಳಾಗಿ ಹೋದೆ ಬಾವ
ಆ ಗೂಡೆನಾ ಗೇನಲಿ ಎಷ್ಟು ಪೆಗ್ಗು ಹಾಕಿದೇತಾ ಮರ್‍ತ್ಹೋತ್
ಆ ಪೊರ್ಲು ಗೂಡೆನಾ ಗೇನಲಿ ಕುಡ್ದ್ ಹೊರಗೆ ಬಾಕನ
ಸಿಕ್ಕಿತ್ ಬಾವ ನನ್ನ ಎದುರ್‌ಗೆ ಆ ಪೊರ್ಲ್ ಗೂಡೆ
ಮುಂದೆ ಹೆಜ್ಜೆ ಇಡಿಕೆ ಮರ್ತೋತ್ ಬಾವ
ನಾ ನೋಡ್ದೆ ಕಣ್ತುಂಬಾ ಆಗೂಡೆನ ನನ್ನ ನಾ ಮರ್ತೋತ್
ಬಾವ, ನಾ ಹೋಗಿ ಒಂದು ಕಡೆಗೆ ಕುದ್ದೇರ! ಅಲ್ಲಿಗೇ ಬಾತ್
ಆ ಪೊರ್ಲು ಗೋಡೆ, ನನ್ನೆದುರಿಗೇ ಬಂದ್
ನಿತ್ತತ್, ನನ್ನ ಯಾರು ಮಾತಾಡ್ಸಿಕೆ ಬಂದರೂ
ಆ ಗೂಡೆದೇ ಗೇನ ಬಾವ, ಯಾರು ಏನು ಹೇಳಿರೂ
ನಂಗೆ ಗೊತ್ತಾತೇಲೇ
ಮಾರನೆ ದಿನ ಹೋದೆರ ಬಾವ ಮುಹೂರ್ತಕ್ಕೆ ನನ್ನ
ಅಪ್ಪ ಅಮ್ಮನ ಜೊತೆಗೆ, ಆ ಪೊರ್ಲು ಗೂಡೆನಾ
ಗೇನ ಬಾತ್‌ರ ಬಾವ, ಕಣ್ಣ ಮುಂದೆ ನಾ ಹೋದೆ ಕವರ್
ಕಟ್ಟಿಕೆ ತೇಳಿ ಹೋದೆ ನಾ ಆ ಗೂಡೆನ ನೋಡಿಕಂಡ್,
ನೋಡಿಕಂಡ್ ಅಡೋಳಿಗೆ ಕವರ್ ಕಟ್ಟಿದೆ ಬಾವ
ಅಲ್ಲಿದ್ದವು ನನ್ನ ಪಜೀತಿ ನೋಡಿ ನಗಾಡ್ರೊ
ಬಾವ ನಂಗೆ ನಾಚಿಕೆ ಆಗಿ ನಾ ಬಂದ್
ನನ್ನ ಸಂಬಂಧಿಕರ ಒಟ್ಟಿಗೆ ಹೋಗಿ ಕುದ್ದೆ ಭಾವ
ಆ ಪೊರ್ಲು ಗೂಡೆ ನಾ ಕುದ್ದಲ್ಲಿಗೇ ಬಾತ್ ಮಾತಾಡ್ಸಿತ್
ಬಾವ, ಎಲ್ಲರ ಕಾಲು ಹಿಡ್ದ್, ನಾ ಗೂಡೆನಾ ನೋಡಿಕಂಡ್ ಆತ್‌ರ ಬಾವ
ಬಾವ ಅಮ್ಮ ಕೇಳ್ರೊ, ಆ ಗೂಡೇನಾ ನಿಂಗೆ ಗೊತ್ತಾತತ
ನಾ ಹೇಳ್ದೆ ಆಗ ಇಲ್ಲೇತಾ. ಅಮ್ಮ ಹೇಳ್ರೊ
ಅದ್ ನಿನ್ನ ಚಿಕ್ಕಪ್ಪನ ಮಗಳ್ ನಿಂಗೆ ಆಕುತಾ
ಅಯ್ಯೋ.. ಭಾವ ಆತುರ ನಂಗೆ ಎದೆಗೆ ಗುಂಡು ಹೊಡ್ದಂಗೆ
ಕುದ್ದಲ್ಲೇ ಕುದ್ದೆ ಭಾವ ಕಾಲು ಘಂಟೆ ಅಯ್ಯೋ
ಭಾವ ನಂಗೆನೇ ನನ್ನ ಗ್ಯಾನ ಮಾಡಿ ನಗೆ ಬಾತುರ
ಯಾರಿಗೆ ಹೇಳದೇ, ಹೋದರೇ ಭಾವ ಮನೆಗೆ
ಹೋದರೆ ಬಾವ, ನಾನೊಂದು ಮದುವೆಗೆ
ಕೇಳ್‌ರ ಬಾವ ನನ್ನ ಕಥೆನಾ.

## ಕಾಮನ್‌ವೆಲ್ತ್ ಗೇಮ್ಸ್‌ಗೆ ಆಯ್ಕೆ ಆದ ಪಟ್ಟೆಮನೆ ನವನೀತ

ಏಪ್ರಿಲ್ 4 ರ್‌ಂದ ಆಸ್ಟ್ರೇಲಿಯದ ಗೋಲ್ಡ್ ಕೋಸ್ಟ್‌ಲಿ ನಡೆಯಲಿರುವ ಕಾಮನ್‌ವೆಲ್ತ್ ಕ್ರೀಡಾಕೂಟದ ಬಾಸ್ಕೆಟ್‌ಬಾಲ್ ತಂಡಕ್ಕೆ ಕೊಡಗ್‌ನ ಪಟ್ಟೆಮನೆ ನವನೀತ ಅವು ಆಯ್ಕೆ ಆಗೊಳೊ.

ನವನೀತ ಕಳ್ದ ವರ್ಷ ಬೆಂಗಳೂರ್‌ಲಿ ನಡ್ದ ಏಷ್ಯಾ ಮಹಿಳಾ ಬಾಸ್ಕೆಟ್‌ಬಾಲ್ ಚಾಂಪಿಯನ್‌ಶಿಪ್‌ನ 'ಬಿ' ಡಿವಿಜನ್ ವಿಭಾಗಲಿ ಸ್ಪರ್ಧಿಸಿ ಗಮನ ಸೆಳೆದಿದ್ದೊ. ಅಲ್ಲದೇ ಪಂದ್ಯಾಟಲಿ ಭಾಗವಹಿಸಿದ ಕರ್ನಾಟಕದ ಒಬ್ಬಳೇ ಆಟಗಾರ್ತಿ ತೇಳ್ವ ಹಿರಿಮೆ ಸ ಇವರ್‌ದ್.

ನವನೀತ ಇವು ಸುಂಟಿಕೊಪ್ಪದ ಪಟ್ಟೆಮನೆ ಉದಯ ಕುಮಾರ್ ಹಂಗೆ ಗಿರಿಜಾ ದಂಪತಿಯ ಮಗಳ್. ಸುಂಟಿಕೊಪ್ಪದ ಸಂತ ಮೇರಿ ಶಾಲೆಲಿ ಪ್ರಾಥಮಿಕ ಹಂಗೆ ಪ್ರೌಢ ಶಿಕ್ಷಣನ ಪಡ್ಕಂಡ್ ಮೈಸೂರ್ ವಿಶ್ವ ವಿದ್ಯಾನಿಲಯಲಿ ಎಂ.ಎ ಸಮಾಜಶಾಸ್ತ್ರ ಸ್ನಾತಕೋತ್ತರ ಪದವಿ ಪಡ್ದೊಳೊ. ಈಗ ಇವು ದಕ್ಷಿಣ ರೈಲ್ವೇಸ್‌ಲಿ ಮೈಸೂರ್‌ಲಿ ಚಾಕರಿ ಮಾಡ್ತಾ ಒಳೊ.

ಇವು ಚೀನಾದ ತೈವಾನ್‌ಲಿ ಇತ್ತೀಚೆಗೆ ನಡ್ದ ವಿಲಿಯಂ ಜಾನ್ ಬಾಸ್ಕೆಟ್‌ಬಾಲ್ ಪಂದ್ಯಾವಳಿಲಿ ನವನೀತ ಭಾಗವಹಿಸಿದ್ದೊ. 2016–17 ನೇ ಸಾಲ್‌ಲಿ ಪಾಂಡೀಚೇರಿಲಿ ನಡ್ದ ಸೀನಿಯರ್ ನ್ಯಾಷನಲ್‌ಲಿ ಕಂಚಿನ ಪದಕ, 2012–13 ಲಿ ಕರ್ನಾಟಕ ಒಲಂಪಿಕ್ಸ್ ಅಸೋಸಿಯೇಷನ್ ಪ್ರಶಸ್ತಿ, 2014–15 ರ ಏಕಲವ್ಯ ಪ್ರಶಸ್ತಿ, ಅದೇ ವರ್ಷ ಅನಂತಪುರಲಿ ನಡ್ದ ದಕ್ಷಿಣ ವಲಯ ಮಟ್ಟದ ಕ್ರೀಡಾಕೂಟಲಿ ಸುರುನ ಇನಾಮು ಹಂಗೆ ಬೆಸ್ಟ್ ಆಲ್‌ರೌಂಡರ್ ಪ್ರಶಸ್ತಿ, 2015–16 ನೇ ಸಾಲ್‌ಲಿ ಮೈಸೂರ್‌ಲಿ ನಡ್ದ ಭಾರತೀಯ ರೈಲ್ವೇಸ್ ತಂದಂದ ಸೀನಿಯರ್ ನ್ಯಾಷನಲ್‌ಲಿ ಚಿನ್ನದ ಪದಕ ಹಂಗೆ ಅತ್ಯದ್ಬುತ ಆಟಗಾರ್ತಿ ಪ್ರಶಸ್ತಿಗಳ್ನ ಪಡ್ಕಂಡೊಳೊ.

ನವನೀತ: ಇದೇ ಸುರುನ ಸಲ ಕಾಮನ್‌ವೆಲ್ತ್ ಗೇಮ್ಸ್‌ಲಿ ಭಾರತನ ಪ್ರತಿನಿಧಿಸ್ತಾ ಇರ್ದು ಖುಷಿ ತಂದುಟು. ಸಾಂಗಟಿತ ಬಲಂದ ಈ ಸಲ ಗೆದ್ದ್ ಪ್ರಶಸ್ತಿನ ನಮ್ಮದಾಗಿಸಿಕಂಡವೆ ತ ಹೇಳ್ದೊ.

ದೇಶನ ಅಂತರಾಷ್ಟ್ರೀಯ ಮಟ್ಟಲಿ ಪ್ರತಿನಿಧಿಸ್ತಾ ಇರುವ ನವನೀತ ಅವ್ಕೆ ಜನಾಂಗ ಪರವಾಗಿ ಶುಭಾಷಯಗ.

### ನಗೆ ಹನಿಗ

–ಹರ್ಷಿತ ಕೇಶವ ಪೇರಿಯನ

ಡಾಕ್ಟರ್: ನಿಂಗೆ ಮೊದ್ವೆ ಆವ್ತ?

ಗುಂಡ: ಹಾಂ ಸರ್! ಗೂಡೆ ಒಟ್ಟಿಗೆ ಆವ್ತು.

ಡಾಕ್ಟರ್: ಎಲ್ಲವೂ ಗೂಡೆ ಒಟ್ಟಿಗೆನೇ ಮೊದ್ವೆ ಆದು.

ಗುಂಡ: ಹಂಗೆತ ಇಲ್ಲೆ... ನನ್ನ ತಂಗೆಗೆ ಹೈದನೊಟ್ಟಿಗೆ ಮೊದ್ವೆ ಮಾಡೊಳೊ.

### ಕಾಲದ ಮಹಿಮೆ

–ಮೇರ್ಕಜೆ ಲೋಹಿತ್ ಸೋಮಯ್ಯ

ಅವ್ವ: ನಮ್ಮ ಕಾಲದ ಮೊದ್ವೆನೇ ಲಾಯ್ಕ ಕೂಸು

ಪಿಳ್ಳಿ: ಯಾಕೆ ಅವ್ವ.. ಹಳೇದ್ ಮನಿ ಗ್ಯಾನ ಆತ ಹೆಂಗೆ?

ಅವ್ವ: ಹಾಂ! ಊಟ ಮಾಡವು ಒಂದೇ ಕಡೆ ಇರ್ತಾ ಇದ್ದೊ. ಬಡ್ಸವು ಅತ್ತಿತ್ತ ಓಡಾಡ್ತಾ ಇದ್ದೊ. ಆದರೆ ಈಗ ಬಡ್ಸವು ಒಂದೇ ಕಡೆ ಇದ್ದವೆ. ಊಟ ಮಾಡವು ಓಡಾಡಿಕಂಡ್ ಊಟ ಮಾಡುವೆ.

ಪಿಳ್ಳಿ ತಲೆ ಮೇಲೆ ಕೈ ಇಸಿ ಕುದ್ದತ್..